# ಕಲಘಟಗಿ ತಾಲೂಕಿನ ಕೆರೆಗಳ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯ, ಹಂಪಿ ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ಸಂಪ್ರಬಂಧ)

ಸಂಶೋಧಕರು

ನೋಂ ಸಂಖ್ಯೆ: ೧೬೦೧೦೮೦೩೦೦೨೩



ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬

೨೦೧೬-೧೭

# ಕಲಘಟಗಿ ತಾಲೂಕಿನ ಕೆರೆಗಳ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ
ಸಾದರಪಡಿಸುತ್ತಿರುವ ಎಂ.ಫಿಲ್ ಪ್ರೌಢಪ್ರಬಂಧ)



ಸಂಶೋಧಕರು

**ನೋಂ ಸಂಖ್ಯೆ: ೧೬೦೧೦೮೦೩೦೦೨೩**



**ಸಮಾಜ ವಿಜ್ಞಾನಗಳ ನಿಕಾಯ**
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

೨೦೧೭

# ಕಲಘಟಗಿ ತಾಲೂಕಿನ ಕೆರೆಗಳ ಅಧ್ಯಯನ

## ಪರಿವಿಡಿ

## ಅಧ್ಯಾಯ–ಒಂದು

# ಕಲಘಟಗಿ ತಾಲೂಕಿನ ಕೆರೆಗಳ ಅಧ್ಯಯನ

### ಪ್ರಸ್ತಾವನೆ

ಭೂಮಿಯ ಮೇಲಿರುವ ಸಕಲ ಜೀವ ರಾಶಿಗಳಿಗೆ ಅಗತ್ಯವಾದ ಮೂಲ ವಸ್ತುಗಳಲ್ಲಿ ಗಾಳಿ, ನೀರು, ಬೆಳಕು ಪ್ರಮುಖವಾಗಿವೆ. ಇಡೀ ಜೀವ ಜಗತ್ತಿನ ಅಸ್ತಿತ್ವವು ನೀರಿನಿಂದ ನಿರ್ದೇಶಿಸಲ್ಪಡುತ್ತದೆ. ನೀರಿಲ್ಲದ ಮಾನವನು ಬದುಕನ್ನು ಊಹಿಸುವುದೂ ಅಸಾಧ್ಯ. ಮಾನವನ ಇಡೀ ಬದುಕು ನೀರನ್ನು ಅವಲಂಬಿಸಿದೆ. ಮಾನವ ಸಂಸ್ಕೃತಿಯ ವಿಕಾಸದಲ್ಲಿ 'ನೀರು' ಅಮೂಲ್ಯವಾಗಿದ್ದು, ಇದು ಜೀವಜಲವೂ ಹೌದು. ಈ ಹಿನ್ನೆಲೆಯಲ್ಲಿಯೇ ನೀರನ್ನು ಪಂಚಭೂತಗಳಲ್ಲಿ ಒಂದೆಂದು ಕರೆದಿರುವುದು. ಪ್ರಪಂಚದ ನಾಗರಿಕತೆಗಳು ಬೆಳೆದುದು ನೀರಿನ ತಾಣಗಳ ಆಸುಪಾಸಿನಲ್ಲಿ ಎಂಬುದು ತಿಳಿದ ಸಂಗತಿ. ಹೀಗಾಗಿಯೇ ಪ್ರಾಗಿತಿಹಾಸ ಕಾಲದ ಮಾನವನ ವಾಸದ ನೆಲೆಗಳು ನೀರಿರುವ ನೈಸರ್ಗಿಕ ತಾಣಗಳೇ ಆಗಿವೆ. ಅವು ನದಿ, ಸರೋವರ, ಹಳ್ಳಕೊಳ್ಳಗಳಾಗಿವೆ. ಈ ದಿಸೆಯಲ್ಲಿ ಮುನ್ನಡೆದು ಕೃತಕವಾಗಿ ನೀರನ್ನು ಸಂಗ್ರಹಿಸಿ ತನ್ನ ಅಗತ್ಯಕ್ಕೆ ತಕ್ಕಂತೆ ಬಳಸಿಕೊಳ್ಳಲು ನಡೆಸಿದ ಪ್ರಯತ್ನಗಳ ಫಲಗಳೇ ಕೆರೆ, ಕಟ್ಟೆ, ಕುಂಟೆ, ಬಾವಿಗಳಾಗಿ ರೂಪತಾಳಿವೆ.

ಇಂತಹ ಪ್ರಯತ್ನಗಳು ನೂತನ ಶಿಲಾಯುಗದ ಅಂತಿಮ ಕಾಲಕ್ಕಾಗಲೇ ವ್ಯಾಪಕವಾಗಿ ಬೆಳೆದು, ಮಾನವ ಒಂದೆಡೆ ನೆಲೆ ನಿಂತು ತನ್ನ ಜೀವನ ಸಾಗಿಸಲು ಪ್ರಾರಂಭಿಸಿದ. ಅರಸರು ಅಧಿಕಾರಿಗಳು ಮೊದಲಾದವರು ತಮ್ಮ ರಾಜ್ಯ, ಪ್ರದೇಶ, ಊರಿನ ಅಭಿವೃದ್ಧಿಯ ದೃಷ್ಟಿಯಿಂದ ನೀರಿನ ತಾಣಗಳಾದ ಕೆರೆ–ಬಾವಿ, ಕಟ್ಟೆ–ಕುಂಟೆಗಳನ್ನು ಅವಿಭಾಜ್ಯ ಅಂಗಗಳಾಗಿ ನಿರ್ಮಿಸಿರುವುದು ಕಂಡುಬರುತ್ತದೆ. ಅಂತೆಯೇ ಕೆರೆ, ಏರಿ, ಕಟ್ಟೆ, ಕೊಳ, ಕುಂಟೆ, ತೀರ್ಥ, ಡೋಣಿ ಇತ್ಯಾದಿ ಸೂಚಿಪದಗಳು ಜಲಾಶಯದ ಪ್ರತ್ಯಯಗಳಾಗಿ ಕಂಡುಬರುತ್ತವೆ.

ವೇದಗಳಲ್ಲಿ ನೀರಾವರಿಗೆ ಸಂಬಂಧಿಸಿದ ಅನೇಕ ಶಬ್ದಗಳಿವೆ. ಉದಾ : 'ಬಾವಿ' (ಕೂಪ), 'ಕಾಲುವೆ' (ಕುಲ್ಯ) 'ಸರೋವರ' (ಸರಸಿ), ಎಂಬ ಪದಗಳು ಮಹಾಭಾರತದ ಅನುಶಾಸನಿಕ ಪರ್ವದಲ್ಲಿ ಕಂಡು ಬರುತ್ತದೆ. ರಾಜನು ಮಾಡಬೇಕಾದ ಕೆಲವು ಪ್ರಮುಖ ಕರ್ತವ್ಯಗಳಲ್ಲಿ ಕೆರೆ, ಕಾಲುವೆ, ಬಾವಿಗಳನ್ನು ನಿರ್ಮಿಸುವಂತೆ ಹೇಳಲಾಗಿದೆ. ಅನೇಕ ಸಾಹಿತ್ಯ, ಪುರಾಣ, ಪ್ರಾಯೋಗಿಕ ಶಾಸ್ತ್ರ ಕೃತಿಗಳು, ವಿದೇಶಿ ಪ್ರವಾಸಿಗರ ಬರಹಗಳು ಕೆರೆಗಳ ನಿರ್ಮಾಣ ಕುರಿತು ಉಲ್ಲೇಖಿಸುತ್ತವೆ. ಅಷ್ಟೇ ಅಲ್ಲದೆ ಕೆರೆಗೆ ಸಂಬಂಧಿಸಿದಂತೆ ಪ್ರಾಚೀನ ಭಾರತದಲ್ಲಿ ಬಳಕೆಯಲ್ಲಿದ್ದ ವ್ಯವಸಾಯ ಪದ್ಧತಿ,

ನೀರಾವರಿ ವ್ಯವಸ್ಥೆ ಮುಂತಾದವುಗಳ ಬಗ್ಗೆ ಪ್ರಸ್ತಾಪಿಸುತ್ತ ಕೆರೆಗಳ ನಿರ್ಮಾಣ, ಅವುಗಳ ಬಳಕೆ, ರಕ್ಷಣೆ, ಪೋಷಣೆಯ ಕುರಿತು ತಿಳಿಸಿವೆ.

"ಕೆರೆಯಂ ಕಟ್ಟಿಸು ಬಾವಿಯಂ ಸವೆಸು ದೇವಾಗಾರಂ ಮಾಡಿಸ
ಜ್ಜೆರೆಯೊಳ್ಸಿಲ್ಕಿದನಾಥರಂ ಬಿಡಿಸು ಮಿತ್ರರ್ಗ್ಗಿಂಬುಕೆಯ್ ನಂಬಿದ
ರ್ಗ್ಗೆರೆವೆಟ್ಟಾಗಿರು ಶಿಷ್ಟರಂ ಪೊರೆಯೆನುತ್ತಿಯೆಂತೆಲ್ಲವಂ ಪಿಂದೆ ತಾ
ಯೆರೆದಳ್ಪಾಲೆರೆವಂದು ತೊಟ್ಟು ಕಿವಿಯೊಳ್ಂ ಲಕ್ಷೀಧರಾಮಾತ್ಯನಾ"

ಈ ಮೇಲೆ ಉಲ್ಲೇಖಿಸಿದ ಪದ್ಯವನ್ನು ವಿಜಯನಗರದ ಅರಸ ಪ್ರೌಢ ದೇವರಾಯನ (ಕ್ರಿ.ಶ. ೧೪೦೬-೧೪೨೨) ಮಂತ್ರಿ ಲಕ್ಷ್ಮೀಧರನು ಕೂಸಾಗಿದ್ದಾಗ ಅವನ ತಾಯಿ ಹಾಡಿ ಹಾಲೆರೆಯುತ್ತಿದ್ದಳೆಂದು ಹಂಪೆಯ ಕಡಳೆಕಾಳು ಗಣಪತಿ ಗುಡಿಯ ಮುಂದಿನ ಅಗಸೆಯಲ್ಲಿರುವ ಕ್ರಿ.ಶ. ೧೪೧೧ ರ ಶಾಸನವು ತಿಳಿಸುತ್ತದೆ. ಈ ಶಾಸನದ ಹಿನ್ನೆಲೆಯಲ್ಲಿ ನಮ್ಮ ಪ್ರಾಚೀನರು ಸಮಾಜದ ಒಳತಿಗಾಗಿ ಕೆರೆ, ಬಾವಿ, ಛತ್ರಗಳನ್ನು ನಿರ್ಮಿಸುತ್ತಿದ್ದರು ಎಂಬುದನ್ನು ಗ್ರಹಿಸಬಹುದಾಗಿದೆ. ಅಂದರೆ ಕೆರೆಯನ್ನು ಕಟ್ಟಿಸುವುದು, ಬಾವಿಯನ್ನು ತೋಡಿಸುವುದು ಅತೀ ಮುಖ್ಯವಾದ ಕಾರ್ಯವಾಗಿತ್ತೆಂಬುದು ಸ್ಪಷ್ಟವಾಗುತ್ತದೆ. ಈ ಕಾರ್ಯವನ್ನು ಮಾಡುವುದು ಸಾಮಾಜಿಕ ಮತ್ತು ನೈತಿಕ ಜವಾಬ್ದಾರಿಯೂ ಆಗಿತ್ತು. ಭಾರತದಲ್ಲಿ ಪ್ರಾಗಿತಿಹಾಸ ಕಾಲದಿಂದಲೂ ಕೆರೆಗಳು ಕಂಡುಬರುತ್ತವೆಯಾದರೂ ಅವುಗಳ ಸಂಖ್ಯೆ ದಕ್ಷಿಣ ಭಾರತದಲ್ಲಿ ಹೆಚ್ಚಾಗಿವೆ. ಉತ್ತರ ಭಾರತ ಹಿಮಾಲಯ ಶ್ರೇಣಿಯಿಂದ ಕೂಡಿದ್ದು ಹಲವಾರು ನದಿಗಳ ಉಗಮ ಸ್ಥಾನವಾಗಿವೆ. ಇದರಿಂದ ವರ್ಷಪೂರ್ತಿ ನದಿಗಳು ತುಂಬಿ ಹರಿಯುತ್ತಿರುವುದರಿಂದ ಇಲ್ಲಿ ಜಲಾಶಯ, ಕೆರೆ, ಕಟ್ಟೆ, ಬಾವಿ, ಕಾಲುವೆಗಳ ನಿರ್ಮಾಣ ವಿರಳವಾಗಿ ಕಂಡುಬರುತ್ತವೆ.

ಕರ್ನಾಟಕವು ಭೌಗೋಳಿಕವಾಗಿ ಬಹುಪಾಲು ಬೆಟ್ಟಗಳಿಂದ ಕೂಡಿದ್ದು ಸಂಪದ್ಭರಿತವಾದ ನಾಡಾಗಿದೆ. ಇಲ್ಲಿ ಪ್ರಾಕೃತಿಕ ರಚನೆಯಿಂದ ವಿಭಾಗಗೊಂಡಿವೆ. ಕರಾವಳಿ, ಮಲೆನಾಡು, ಬಯಲು ಸೀಮೆಗಳಿಂದ ಕೂಡಿದೆ. ಇವುಗಳಲ್ಲಿ ಅತ್ಯಂತ ವಿಶಿಷ್ಟವಾದ ಭೌಗೋಳಿಕ ಪ್ರದೇಶವನ್ನು ಹೊಂದಿದ ಧಾರವಾಡವು ಮಲೆನಾಡು ಹಾಗೂ ಬಯಲು ಸೀಮೆಯ ಪ್ರದೇಶವಾಗಿದ್ದು, ಎರಡು ಪ್ರದೇಶಗಳಿಗೆ ದ್ವಾರದಂತಿದೆ. ಈ ಪ್ರದೇಶದಲ್ಲಿ ಫಲವತ್ತಾದ ಮಸಾರಿ ಅಥವಾ ಕೆಂಪು ಭೂಮಿ ಹಾಗೂ ಕಪ್ಪು ಭೂಮಿಯನ್ನು ಹೊಂದಿದೆ. ಈ ಪ್ರದೇಶದಲ್ಲಿ ಗೋಧಿ, ಜೋಳ, ಭತ್ತ, ಶೇಂಗಾ, ತೊಗರಿ, ಹೆಸರು ಇನ್ನಿತರ ಏಕದಳ ಮತ್ತು ದ್ವಿದಳ ದಾನ್ಯಗಳನ್ನು ಬೆಳೆಯಲಾಗುತ್ತದೆ. ಇದು ಅರೆಮಲೆನಾಡಿನ ಭಾಗವಾಗಿರುವುದರಿಂದ ಗರಿಷ್ಠವಾದ ಮಳೆ ಬೀಳುತ್ತದೆ. ಪ್ರಾಕೃತಿಕವಾಗಿ ಕೆರೆ, ಕಾಲುವೆ, ಹಳ್ಳ-ಕೊಳ್ಳ ನಿರ್ಮಾಣಗೊಂಡಿವೆ. ಆದರೆ ಧಾರವಾಡ ಜಿಲ್ಲೆಯ ಭಾಗದಲ್ಲಿ ಅತಿ ಹೆಚ್ಚಾಗಿ ಕೆರೆ, ಕಾಲುವೆ, ಬಾವಿ

ನಿರ್ಮಾಣಗೊಂಡಿದ್ದನ್ನು ಕಾಣುತ್ತೇವೆ. ಇದಕ್ಕೆ ಕಾರಣ ಈ ಪ್ರದೇಶದಲ್ಲಿ ನದಿಗಳು ಕಂಡು ಬರುವುದಿಲ್ಲ. ಇಲ್ಲಿಯ ಜನರು ಹೆಚ್ಚಾಗಿ ಕೆರೆ, ಬಾವಿ ಅಂತರ್ಜಲವನ್ನು ಅವಲಂಬಿಸಿದ್ದಾರೆ. ಇತ್ತೀಚೆಗೆ ಈ ಜಿಲ್ಲೆಯ ಪ್ರಮುಖ ನಗರ, ತಾಲೂಕು ಪ್ರದೇಶಗಳಲ್ಲಿ ಅತಿಯಾದ ಅಂತರ್ಜಲ ಸಂಪನ್ಮೂಲ ಕಡಿಮೆಯಾಗಿದೆ. ಆದ ಕಾರಣ ಈ ಪ್ರದೇಶದಲ್ಲಿ ಮುಂಚೆ ಇದ್ದ ಕೆರೆ, ಕಾಲುವೆ, ಹಳ್ಳ-ಕೊಳ್ಳಗಳು ಆಧುನಿಕ ವೈಭವದಲ್ಲಿ ತಮ್ಮ ಅಸ್ತಿತ್ವವನ್ನು ಕಳೆದುಕೊಂಡಿವೆ.

ನೀರಿನ ಸಮಸ್ಯೆಯನ್ನು ಪರಿಹರಿಸಲು ನಮ್ಮ ಪ್ರಾಕೃತಿಕ ಪರಿಸರವನ್ನು ಉಳಿಸಿ, ಬೆಳಸಬೇಕಾಗಿರುವುದು ನಮ್ಮೆಲ್ಲರ ಆದ್ಯ ಕರ್ತವ್ಯವಾಗಿದೆ. ಇದೇ ಪರಿಸ್ಥಿತಿಯು ಧಾರವಾಡ ಜಿಲ್ಲೆಯ ಎಲ್ಲ ತಾಲೂಕುಗಳಿಗೂ ಅನ್ವಯಿಸುತ್ತದೆ. ಅದರಲ್ಲೂ ಪ್ರಮುಖವಾಗಿ ಕಲಘಟಗಿ ತಾಲೂಕಿನಲ್ಲಿ ಕೆರೆ, ಬಾವಿ, ಕಾಲುವೆ, ಹಳ್ಳ-ಕೊಳ್ಳಗಳು ಹೆಚ್ಚಾಗಿ ಕಂಡುಬರುತ್ತವೆ. ಅಲ್ಲಿಯ ಜನರು ಕೆರೆ, ಹಳ್ಳ, ಬಾವಿಗಳನ್ನೇ ಅವಲಂಬಿಸಿದ್ದಾರೆ. ಕಲಘಟಗಿ ತಾಲೂಕು ಪ್ರಾಕೃತಿಕತೆಯಿಂದ ಸಮೃದ್ಧಿಯನ್ನು ಹೊಂದಿದ ಪ್ರದೇಶವಾಗಿದ್ದರೂ, ಇಲ್ಲಿ ನೀರಿನ ಸಂಪನ್ಮೂಲ ಇತ್ತೀಚಿನ ಅಧ್ಯಯನದ ಅಂಕಿ ಅಂಶಗಳ ಕುಸಿತಗೊಂಡಿರುವುದನ್ನು ಕಾಣುತ್ತೇವೆ. ಈ ಹಿನ್ನೆಲೆಯಲ್ಲಿ ಕಲಘಟಗಿ ತಾಲೂಕಿನ ನೀರಾವರಿ ಸಂಪನ್ಮೂಲಗಳ ಕುರಿತು ಅಧ್ಯಯನ ಕೈಗೊಳ್ಳಲಾಗಿದೆ.

ಧಾರವಾಡ ಜಿಲ್ಲೆಯು ಐದು ತಾಲೂಕುಗಳನ್ನು ಒಳಗೊಂಡಿದೆ. ಅದರಲ್ಲಿ ಕಲಘಟಗಿ ತಾಲೂಕು ಕೂಡ ಒಂದಾಗಿದೆ. ಪೂರ್ವದಲ್ಲಿ ಹುಬ್ಬಳ್ಳಿ, ಕುಂದಗೋಳ ಮತ್ತು ಶಿಗ್ಗಾಂವಿ ಮತ್ತು ಪಶ್ಚಿಮದಲ್ಲಿ ಹಳಿಯಾಳ ಮತ್ತು ಯಲ್ಲಾಪುರ ತಾಲೂಕುಗಳು, ದಕ್ಷಿಣದಲ್ಲಿ ಮುಂಡಗೋಡ ಹಾಗೂ ಉತ್ತರದಲ್ಲಿ ಧಾರವಾಡ ತಾಲೂಕುಗಳಿವೆ. ಇಲ್ಲಿ ಅನೇಕ ಮನೆತನಗಳು, ಮಂತ್ರಿ ಮಾಂಡಳಿಕರು ಮತ್ತು ಸಾಮಂತರು ಆಳ್ವಿಕೆ ನಡೆಸಿರುವುದು ಕಂಡುಬಂದಿದೆ. ಇವುಗಳಿಗೆ ಆಧಾರವಾಗಿ ಕೆರೆ, ದೇವಾಲಯ, ಶಾಸನ, ವೀರಗಲ್ಲುಗಳು ಇಂದಿಗೂ ಲಭ್ಯವಿವೆ. ಕಲಘಟಗಿಯ ಫಲವತ್ತಾದ ಮಸಾರಿ ಅಥವಾ ಕೆಂಪು ಭೂಮಿಯಲ್ಲಿ ಕಂಡುಬಂದರೆ ಕೆಲವು ಕಡೆ ಗರಸಿನ ಮಣ್ಣು ಅಥವಾ ಭೂಮಿ ಇದೆ. ಈ ಹಿನ್ನೆಲೆಯಲ್ಲಿ ಇಷ್ಟೆಲ್ಲ ಪ್ರಾಕೃತಿಕ ಸಂಪತ್ತುಗಳಿಂದ ಕೂಡಿರುವ ಕಲಘಟಗಿ ತಾಲೂಕಿನ ಕೆರೆಗಳ ಅಧ್ಯಯನ ಎಂಬ ಸಂಪ್ರಬಂಧವನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

**ಅಧ್ಯಯನದ ಉದ್ದೇಶ**

ಪ್ರತಿಯೊಂದು ಪ್ರದೇಶಕ್ಕೂ ತನ್ನದೇ ಆದ ವಿಶಿಷ್ಟ ಇತಿಹಾಸ ಇದ್ದೇ ಇರುತ್ತದೆ. ಸ್ಥಳೀಯ ಇತಿಹಾಸವನ್ನು ಸೂಕ್ಷ್ಮವಾಗಿ ಪರಿಶೀಲಿಸಿದಾಗ ಅವುಗಳ ರಾಜಕೀಯ, ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಚಟುವಟಿಕೆಗಳು ನಿಚ್ಚಳವಾಗಿ ಕಂಡುಬರುತ್ತವೆ. ಇಂತಹ ಅಧ್ಯಯನ ಕೈಗೊಳ್ಳುವಾಗ

ಚಾರಿತ್ರಿಕ ದೃಷ್ಟಿಯಿಂದ ಪರಿಶೀಲಿಸುವುದು ಉಪಯುಕ್ತವಾಗಿದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನದಲ್ಲಿ ಕೆಳಕಂಡ ಉದ್ದೇಶಗಳನ್ನು ನಿರೂಪಿಸಲು ಪ್ರಯತ್ನಿಸಲಾಗಿದೆ.

ಪ್ರಸ್ತುತ ವಿಷಯವಾದ 'ಕಲಘಟಗಿ ತಾಲೂಕಿನ ಕೆರೆಗಳ' ಕುರಿತ ಅಧ್ಯಯನದಲ್ಲಿ ಕೆರೆಗಳ ನಿರ್ಮಾಣ, ಶೈಲಿ ಹಾಗೂ ಅವುಗಳೊಂದಿಗೆ ಸಂಬಂಧಿಸಿದ ರಾಜಕೀಯ, ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಚಟುವಟಿಕೆಗಳ ಕುರಿತು ಅಧ್ಯಯನ ಮಾಡಲಾಗುವುದು.

**ಅಧ್ಯಯನದ ವ್ಯಾಪ್ತಿ**

ಒಂದು ದೇಶದ ಇತಿಹಾಸ ಕುರಿತು ಅಧ್ಯಯನ ಮಾಡಬೇಕಾದರೆ ಅದು ತನ್ನದೇ ಆದ ವ್ಯಾಪ್ತಿ, ಮಿತಿಗಳನ್ನು ಅವಲಂಬಿಸಿರುತ್ತದೆ. ಅದೇರೀತಿ ಪ್ರಸ್ತುತ ಕಲಘಟಗಿ ತಾಲೂಕಿನ ಕೆರೆಗಳ ಅಧ್ಯಯನದ ವ್ಯಾಪ್ತಿಯನ್ನು ಕಲಘಟಗಿ ತಾಲೂಕಿಗೆ ಮಾತ್ರ ಸಿಮೀತಗೊಳಿಸಲಾಗಿದೆ. ಅದರೊಂದಿಗೆ ಪ್ರಾಚೀನ ಕಾಲದಿಂದ ಇತ್ತಿಚ್ಚಿನವರೆಗಿನ ಕೆರೆಗಳ ನಿರ್ಮಾಣ ಕುರಿತು ಅಧ್ಯಯನದಲ್ಲಿ ಚರ್ಚಿಸಲಾಗುವುದು.

**ಅಧ್ಯಯನದ ಸಮೀಕ್ಷೆ**

ಇದುವರೆಗೆ ಹಲವು ವಿದ್ವಾಂಸರು ಮತ್ತು ಸಂಶೋಧಕರು ತಮ್ಮ ಅಧ್ಯಯನದ ಪರಿಮಿತಿಯಲ್ಲಿ ಕಲಘಟಗಿ ತಾಲೂಕಿನ ಕುರಿತು ಕೆಲವು ಗ್ರಂಥ, ಲೇಖನ, ಪ್ರಬಂಧಗಳನ್ನು ಸಾದರಪಡಿಸಿರುತ್ತಾರೆ. ಕೆರೆ–ಬಾವಿಗಳ ಕುರಿತು ಇಡೀ ಕರ್ನಾಟಕವನ್ನೊಳಗೊಂಡಂತೆ ಅಧ್ಯಯನಗಳು ನಡೆದಿವೆ. ಆದರೆ ಕಲಘಟಗಿ ತಾಲೂಕಿನ ಚಾರಿತ್ರಿಕ ಅಧ್ಯಯನಗಳು ಈವರೆಗೆ ನಡೆದಿರುವುದಿಲ್ಲ.

ವೆಂಕಟರಂಗೋ ಕಟ್ಟಿಯವರು ಸಂಪಾದಿಸಿರುವ ಧಾರವಾಡ ಜಿಲ್ಲೆಯ ಗ್ಯಾಜೆಟಿಯರ್‌ನಲ್ಲಿ ಕಲಘಟಗಿ ತಾಲೂಕಿನ ಭೌಗೋಳಿಕ, ಆರ್ಥಿಕ, ರಾಜಕೀಯ, ಸಾಮಾಜಿಕ, ಶೈಕ್ಷಣಿಕ ಹಿನ್ನಲೆಯ ಕುರಿತಾದ ಸಂಕ್ಷಿಪ್ತವಾದ ವಿವರಗಳಿವೆ. ಸೂರ್ಯನಾಥ ಕಾಮತ್ ಅವರು ರಚಿಸಿರುವ 'ಧಾರವಾಡ ಜಿಲ್ಲೆಯ ಗ್ಯಾಜೆಟಿಯರ್'ನಲ್ಲಿ ಕಲಘಟಗಿ ತಾಲೂಕಿನ ಕೃಷಿ ಪದ್ಧತಿ, ನೀರಾವರಿ ವ್ಯವಸ್ಥೆ, ಕೈಗಾರಿಕೆ ಹವಾಮಾನ ಮತ್ತು ವಾಯುಗುಣದಲ್ಲಿ ಆಗುವ ಬದಲಾವಣೆಯ ಬಗ್ಗೆ ಹಾಗೂ ಕಲಘಟಗಿ ಪ್ರದೇಶದಲ್ಲಿ ಪ್ರಸಿದ್ಧವಾಗಿರುವ ತೊಟ್ಟಿಲಗಳ ಬಗ್ಗೆ ಸಂಕ್ಷಿಪ್ತ ಮಾಹಿತಿಯನ್ನು ಒದಗಿಸಿಕೊಟ್ಟಿದೆ. ಅಲ್ಲಿನ ರಾಜಕೀಯ ಇತಿಹಾಸ, ಭೌಗೋಳಿಕ ಪರಿಸರ, ಜನಸಂಖ್ಯೆ, ಆರ್ಥಿಕತೆ ಬಗ್ಗೆ ಈ ಕೃತಿಗಳಲ್ಲಿ ಉಲ್ಲೇಖಗಳಿವೆ. ಎಂ.ಎಂ. ಕಲಬುರ್ಗಿಯವರು ರಚಿಸಿರುವ 'ಧಾರವಾಡ ಜಿಲ್ಲೆಯ ಶಾಸನ

ಸೂಚಿ'ಯಲ್ಲಿ ಕಲಘಟಗಿ ತಾಲೂಕಿನಲ್ಲಿ ದೊರೆತ ಶಾಸನಗಳನ್ನು ಈಗಾಗಲೇ ಪ್ರಕಟವಾಗಿರುವ ಶಾಸನಗಳನ್ನು ಒಂದೆಡೆ ಕಲೆಹಾಕಿ ಅಧ್ಯಯನ ಮಾಡಿದ್ದಾರೆ.

ಕುಪ್ಪಸ್ವಾಮಿಯವರು "Tank Of Irrigation in Karnataka historical serve"ಎಂಬ ಕೃತಿಯಲ್ಲಿ ಕರ್ನಾಟಕದ ಪ್ರಮುಖ ಕೆರೆಗಳನ್ನು ಮಾತ್ರ ಉಲ್ಲೇಖಿಸಿದ್ದಾರೆ.

ಸಿ.ಟಿ.ಎಂ. ಕೊಟ್ರಯ್ಯನವರು(ಮೂಲ) ಧ್ರುವನಾರಾಯಣ ಎಂ(ಕನ್ನಡ ಅನು) 'ವಿಜಯನಗರ ಸಾಮ್ರಾಜ್ಯ ನೀರಾವರಿ ವ್ಯವಸ್ಥೆ' ಎಂಬ ಕೃತಿಯಲ್ಲಿ ವಿಜಯನಗರ ಸಾಮ್ರಾಜ್ಯದ ಅವಧಿಯಲ್ಲಿನ ಕೆರೆ–ಬಾವಿ, ಕಾಲುವೆಗಳನ್ನು ಉಲ್ಲೇಖಿಸುತ್ತ ಕೆರೆಗಳನ್ನು ಕಟ್ಟುವ ಉದ್ದೇಶ, ಭೌಗೋಳಿಕ ಪರಿಸರದ ಹಿನ್ನಲೆ, ಕೆರೆಗಳನ್ನು ಕಟ್ಟುವಲ್ಲಿ ಮುಂದಾದ ರಾಜರು, ಗ್ರಾಮಗಳ ಸ್ಥಾನಿಕಾಧಿಕಾರಿಗಳು, ದಂಡನಾಯಕರ ಬಗ್ಗೆ ಶಾಸನಾಧಾರಗಳ ಮೂಲಕ ಪರಿಚಯಿಸಿದ್ದಾರೆ.

ಜಿ.ಎಸ್.ದೀಕ್ಷಿತ್ ಮತ್ತು ಜಿ.ಆರ್. ಕುಪ್ಪಸ್ವಾಮಿ., ಎಸ್. ಕೆ.ಮೋಹನ (ಅನು) ನೀಲತ್ತಹಳ್ಳಿ ಕಸ್ತೂರಿ, 'ಕರ್ನಾಟಕದಲ್ಲಿ ಕೆರೆ ನೀರಾವರಿ' ಎಂಬ ಗ್ರಂಥದಲ್ಲಿ ಪ್ರಾಚೀನ ಕಾಲದಿಂದ ಬ್ರಿಟಿಷರ ಆಡಳಿತದ ವರೆಗಿನ ಕೆರೆಗಳ ಸಂರಕ್ಷಣೆ, ಜಲ ನಿರ್ವಹಣೆ ಮತ್ತು ಹಣಕಾಸು ಎಂಬಿತ್ಯಾದಿ ಮಹತ್ವದ ಅಂಗಗಳನ್ನು ಕುರಿತು ಚರ್ಚಿಸಲಾಗಿದೆ.

ಮುನಿರಾಜಪ್ಪನವರು ಸಂಪಾದಿಸಿರುವ ಕರ್ನಾಟಕದಲ್ಲಿ ಕೆರೆ ನೀರಾವರಿ ಎಂಬ ಗ್ರಂಥದಲ್ಲಿ ಕರ್ನಾಟಕದಲ್ಲಿ ಕಂಡು ಬರುವ ಪ್ರಮುಖ ಕೆರೆಗಳ ಸಂಕ್ಷಿಪ್ತ ಚಿತ್ರಣವನ್ನು ನೀಡಿದ್ದಾರೆ.

ಸಿ.ಎಸ್. ವಾಸುದೇವನ್ ಅವರ 'ಹಂಪಿ ಪರಿಸರದ ಕೆರೆಗಳು' ಎಂಬ ಪ್ರಕಟಿತ ಗ್ರಂಥದಲ್ಲಿ ಪ್ರಾಚೀನ ಭಾರತದಲ್ಲಿ ಕೆರೆ ನೀರಾವರಿ ಪದ್ಧತಿಯೊಂದಿಗೆ ವಿಜಯನಗರ ಕಾಲದಲ್ಲಿದ್ದ ಕೆರೆ ನೀರಾವರಿ ಪದ್ದತಿ ಹಾಗೂ ಹೊಸಪೇಟೆ ತಾಲೂಕಿನ ವಿಜಯನಗರ ಕಾಲದಲ್ಲಿ ಕಂಡು ಬರುವ ತೆರಿಗೆ ಪದ್ದತಿ, ಕೆರೆಕಟ್ಟಲು ಇದ್ದ ನಂಬಿಕೆ, ಆಚರಣೆಗಳನ್ನು ಕುರಿತು ಚರ್ಚಿಸುತ್ತಾ ಬಳ್ಳಾರಿ ಜಿಲ್ಲೆಯ ಕೆರೆಯ ಅಧಿದೇವತೆಯಾಗಿ ಪೂಜೆಗೊಳ್ಳುವ ಕನ್ನೀರಮ್ಮನ ಬಗ್ಗೆ ಸಂಕ್ಷಿಪ್ತವಾದ ವಿವರಣೆಯನ್ನು ನೀಡಿದ್ದಾರೆ.

ಈ ಮೇಲಿನ ಅಧ್ಯಯನಗಳು ಕರ್ನಾಟಕವನ್ನು ಪ್ರತಿನಿಧಿಸಿದರೆ ಕಲಘಟಗಿ ತಾಲೂಕಿನ ಕುರಿತು 'ಕಲಘಟಗಿ ಕಲೆ' ಎಂಬ ಸಂಪ್ರಬಂಧದಲ್ಲಿ ಕಲಘಟಗಿಯ ಭೌಗೋಳಿಕತೆ ಮತ್ತು ಚಾರಿತ್ರಿಕ ಒನ್ನೆಲೆ ಹಾಗೂ ಕೃಷಿ ವ್ಯವಸ್ಥೆ ಮುಂತಾದ ವಿಷಯಗಳ ಬಗ್ಗೆ ಸಂಕ್ಷಿಪ್ತವಾಗಿ ಬರೆದಿದ್ದಾರೆ.

ಸಿ. ಮಹದೇವ ಅವರ 'ಕರ್ನಾಟಕ ದೇವಾಲಯಕೋಶ : ಧಾರವಾಡ ಜಿಲ್ಲೆ' ಎಂಬ ಕೃತಿಯಲ್ಲಿ ಕಲಘಟಗಿ ತಾಲೂಕಿನಲ್ಲಿ ಕಂಡುಬರುವ ದೇವಾಲಯ, ಮೂರ್ತಿಶಿಲ್ಪ, ಕೋಟೆ ಕೊತ್ತಲು, ಬುರುಜು ಹುಡೇವುಗಳು, ಕೆರೆ–ಕಟ್ಟೆಗಳು ಹಾಗೂ ಅಪ್ರಕಟಿತ ಶಾಸನಗಳ ನಮೂದು ಹಾಗೂ ಸ್ಥಳೀಯವಾಗಿ ಲಭ್ಯವಾಗುವ ಐತಿಹ್ಯಗಳ ಬಗೆಗಿನ ಪರಿಚಯಗಳನ್ನು ಕುರಿತು ವಿವರಿಸಿದ್ದಾರೆ.

ಕಲಘಟಗಿ ತಾಲೂಕಿನ ಬಗೆಗೆ ಪ್ರಕಟಗೊಂಡಿರುವ ಕೃತಿ ಎಂದರೆ 'ಧಾರವಾಡ ಜಿಲ್ಲೆಯ ಪುರಾತತ್ವ' ಎಂಬ ಈ ಕೃತಿಯನ್ನು ಬಿ. ಜಯಮ್ಮ ಅವರು ಪ್ರಕಟಿಸಿದ್ದಾರೆ. ಅದರಲ್ಲಿ ಈ ತಾಲೂಕಿನ ಶಾಸನೋಕ್ತ ಮಾಹಿತಿಗಳು ಲಭ್ಯವಾಗಿವೆ.

೧೯೯೨ ರಲ್ಲಿ ಪ್ರಕಟವಾದ ಕರ್ನಾಟಕ ಇತಿಹಾಸ ದರ್ಶನದಲ್ಲಿ ಜಿ.ಎಸ್ ದಿಕ್ಷೀತ್ ಅವರು 'ಕೆರೆಗಳ ಬಗ್ಗೆ ಐತಿಹಾಸಿಕ ಸಂಶೋಧನೆಯ ಅವಶ್ಯಕತೆ' ಎಂಬ ಲೇಖನದಲ್ಲಿ ಕೆರೆಗಳ ನಿರ್ವಹಣೆಯ ಕುರಿತು ಮಾಹಿತಿ ದೊರೆತಿದೆ.

ಎಸ್.ಎಲ್.ಶಾಂತಕುಮಾರಿ ಅವರ 'ತಂಬೂರು ಶಾಸನ' ಎಂಬ ಲೇಖನದಲ್ಲಿ ಈ ಗ್ರಾಮದ ಪ್ರಾಚೀನ ಕಾಲದ ದೇವಾಲಯ ಮತ್ತು ಶಾಸನಗಳಲ್ಲಿ ಗ್ರಾಮದ ಐತಿಹಾಸಿಕತೆಯ ಬಗ್ಗೆ ಮಾಹಿತಿ ನೀಡಿದ್ದಾರೆ.

೨೦೦೩ರಲ್ಲಿ ರಚನೆಯಾದ ಕರ್ನಾಟಕ ಇತಿಹಾಸ ದರ್ಶನದಲ್ಲಿ ಚನ್ನಕ್ಕ ಪಾವಟೆ ಅವರು 'ಕಲಘಟಗಿ ಪರಿಸರದಲ್ಲಿ ಶಿವಶರಣರ ಸಂಚಲನದ ಕುರುಹುಗಳು' ಎಂಬ ಲೇಖನದಲ್ಲಿ ಕಲಘಟಗಿ ಪರಿಸರದ ಬಗ್ಗೆ ವಿವರಿಸಿದ್ದಾರೆ.

ಪ್ರಸ್ತುತ ಅಧ್ಯಯನದಲ್ಲಿ ಶಾಸನಗಳು ಮಹತ್ವದ ಆಕರಗಳಾಗದೇ ಮೌಖಿಕ ಪರಂಪರೆ ಮತ್ತು ಐತಿಹ್ಯಗಳನ್ನು ಅಧ್ಯಯನ ಚೌಕಟ್ಟಿನಲ್ಲಿ ಒಳಪಡಿಸುವ ಪ್ರಯತ್ನ ಮಾಡಲಾಗಿದೆ. ಇವೆಲ್ಲಾ ಚಾರಿತ್ರಿಕ ಹೊಸ ದೃಷ್ಟಿಗೆ ಸಾಕ್ಷಿಯಾಗಿ ಪ್ರಾದೇಶಿಕ ಇತಿಹಾಸ ರಚನೆಯ ಆಯಾಮಗಳನ್ನು ವಿಸ್ತರಿಸಿವೆ. ಈ ನಿಟ್ಟಿನಲ್ಲಿ ಕಲಘಟಗಿ ತಾಲೂಕಿನ ಕೆರೆಗಳ ಅಧ್ಯಯನದಲ್ಲಿ ಈವರೆಗಿನ ಅಧ್ಯಯನಗಳಲ್ಲಿ ಕಂಡುಬರುವ ಕೊರತೆಯನ್ನು ತುಂಬಿಕೊಡುವ ಪ್ರಯತ್ನ ಮಾಡಲಾಗಿದೆ.

ಕರ್ನಾಟಕ ಇತಿಹಾಸ ದರ್ಶನದಲ್ಲಿ ಎಸ್.ಕೆ. ಜೋಶಿ ಅವರು 'ಕಲಘಟಗಿ ಪ್ರದೇಶದ ಪುರಾತತ್ವ' ಎಂಬ ಲೇಖನದಲ್ಲಿ ಕಲಘಟಗಿಯಲ್ಲಿ ದೊರೆತಂತಹ ಶಾಸನಗಳು, ದೇವಾಲಯಗಳು, ಕೆರೆ–ಕಟ್ಟೆಗಳು ಪ್ರಾಚ್ಯಾವಶೇಷಗಳ ಬಗ್ಗೆ ಸಂಕ್ಷಿಪ್ತವಾಗಿ ವಿವರಿಸಿದ್ದಾರೆ.

ಅಪ್ಪಣ್ಣ ಎನ್ ಹಂಜೆ ಅವರು ೨೦೧೫ ರಲ್ಲಿ 'ಸಮವಸರಣ' ಎಂಬ ಸಂಶೋಧನ ಲೇಖನಗಳಲ್ಲಿ ಕಲಘಟಗಿ ತಾಲೂಕಿನ ಜೈನಾವಶೇಷಗಳ ಕುರಿತು ಪೂರಕ ಮಾಹಿತಿಯನ್ನು ಒದಗಿಸಿದ್ದಾರೆ.

ಇದುವರೆಗಿನ ಅಧ್ಯಯನಗಳನ್ನು ಗಮನಿಸಿದರೆ ಕಲಘಟಗಿ ತಾಲೂಕಿನ ರಾಜಕೀಯ ಚರಿತ್ರೆ, ಜೈನಾವಶೇಷ, ಜಾನಪದಕಲೆ, ಶಾಸನ, ದೇವಾಲಯ, ಸ್ಥಳಗಳ ಪರಿಚಯಾತ್ಮಕ ಅಧ್ಯಯನಗಳು ನಡೆದಿವೆಯೇ ಹೊರತು ಕಲಘಟಗಿ ತಾಲೂಕನ್ನೇ ಹಾಗೂ ಕೇಂದ್ರವಾಗಿರಿಸಿಕೊಂಡು ಸಮಗ್ರವಾದ ಕೆರೆಗಳಿಗೆ ಸಂಬಂಧಿಸಿದ ಅಧ್ಯಯನವು ನಡೆದಿರುವುದಿಲ್ಲ ಆದ್ದರಿಂದ ಕಲಘಟಗಿ ತಾಲೂಕಿನ ಕೆರೆಗಳನ್ನು ಚಾರಿತ್ರಿಕವಾಗಿ ಕಟ್ಟಿಕೊಡುವ ಉದ್ದೇಶವನ್ನು ಹೊಂದಿದೆ.

**ಅಧ್ಯಯನದ ವಿಧಾನ**

ಪ್ರಸ್ತುತ ಅಧ್ಯಯನವು ಬಹುತೇಕ ಕ್ಷೇತ್ರಕಾರ್ಯ ಆಧಾರಿತವಾಗಿದೆ. ಛಾಯಾಚಿತ್ರಗಳನ್ನು ಈ ಅಧ್ಯಯನದ ಸಂಶೋಧನೆಗಾಗಿ ಕಲಘಟಗಿ ತಾಲೂಕನ್ನು ಆಯ್ದುಕೊಂಡಾಗ ಕಲಘಟಗಿ ತಾಲೂಕು ಮತ್ತು ಗ್ರಾಮ ಪಂಚಾಯತಿ ಕಛೇರಿಗಳಲ್ಲಿ ಗ್ರಾಮಗಳ ಪಟ್ಟಿ ಪಡೆದುಕೊಂಡು ಕ್ಷೇತ್ರಕಾರ್ಯ ಕೈಗೊಳ್ಳಲಾಯಿತು. ತಾಲೂಕಿನ ಮೂರು ಹೋಬಳಿಗಳು, ೮೭ ಗ್ರಾಮಗಳು, ೨೮ ಪಂಚಾಯತಿಗಳಿವೆ. ತಾಲೂಕಿನ ಹಳ್ಳಿಗಳಿಗೆ ಭೇಟಿ ನೀಡಿ ಪ್ರಾಚೀನ ದೇವಾಲಯ, ಶಾಸನ, ವೀರಗಲ್ಲು, ಕೆರೆ–ಬಾವಿಗಳ ಛಾಯಾಚಿತ್ರ ಹಾಗೂ ಅಗತ್ಯ ನಕ್ಷೆಗಳ ಮೂಲಕ ದಾಖಲಿಸಿಕೊಳ್ಳಲಾಗಿದೆ.

ಕೆರೆಗಳ ಬಗ್ಗೆ ಸಣ್ಣ ನೀರಾವರಿ ಇಲಾಖೆ, ಜಿಲ್ಲಾ, ತಾಲೂಕು ಮತ್ತು ಗ್ರಾಮ ಪಂಚಾಯಿತಿಗಳು ನೀಡಿದ ದಾಖಲೆಗಳು ಮತ್ತು ಕೃಷಿ ಇಲಾಖೆಯಿಂದ ಬೆಳೆಗಳಿಗೆ ಸಂಬಂಧಿಸಿದ ವರದಿಗಳು ಹಾಗೂ ಅಧ್ಯಯನಕ್ಕೆ ಪೂರಕವಾಗಿರುವ ಗ್ರಂಥಗಳಿಂದಲೂ ಮಾಹಿತಿ ಪಡೆದು, ಕೆರೆಗಳ ಏರಿ, ತೂಬು, ಕೋಡಿ ಮತ್ತು ಮೌಖಿಕ ಪರಂಪರೆ, ಜನಪದ, ನಂಬಿಕೆ, ಐತಿಹ್ಯಗಳು ಮುಂತಾದ ಪ್ರಾಥಮಿಕ ಮಾಹಿತಿಗಳನ್ನು ಸಂಗ್ರಹಿಸಿ ಅನುಷಂಗಿಕ ಆಕರಗಳ ಮೂಲಕ ಮಾಹಿತಿಗಳನ್ನು ವೈಜ್ಞಾನಿಕವಾಗಿ ವಿಶ್ಲೇಷಿಸಿ ಪುರಾತತ್ವೀಯ ನೆಲೆಗಟ್ಟಿನ ಮೇಲೆ ಸಂಪ್ರಬಂಧವನ್ನು ರಚಿಸಲಾಗಿದೆ.

**ಅಧ್ಯಯನದ ಸ್ವರೂಪ**

ಕಲಘಟಗಿ ತಾಲೂಕಿನ ಕೆರೆಗಳನ್ನು ಕುರಿತು ಅಧ್ಯಯನವು ಹೆಚ್ಚಾಗಿ ಕ್ಷೇತ್ರಕಾರ್ಯವನ್ನು ಅವಲಂಬಿಸಿದೆ. ಇದರ ಬಗ್ಗೆ ಇದುವರೆಗೂ ಕೆರೆ, ಶಾಸನ, ದೇವಾಲಯ, ಬಾವಿ ಹಾಗೂ

ವೀರಗಲ್ಲುಗಳನ್ನು ಅಧ್ಯಯನ ಮಾಡಿ ಆ ಮೂಲಕ ಕೆರೆಗಳಿಗಿರುವ ಸಂಬಂಧವನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

ಕೆರೆಗಳ ಬಗ್ಗೆ ಕಲಘಟಗಿ ಪರಿಸರದ ಜನ ಮತ್ತು ಸಣ್ಣ ನೀರಾವರಿ ಇಲಾಖೆಯವರು ನೀಡಿದ ದಾಖಲೆಗಳು ಮತ್ತು ಕೃಷಿ ಇಲಾಖೆಯಿಂದ ಬೆಳೆಗಳಿಗೆ ಸಂಬಂಧಿಸಿದ ವರದಿಗಳನ್ನು ಸಂಗ್ರಹಿಸಿ ಹಾಗೂ ಅಧ್ಯಯನಕ್ಕೆ ಪೂರಕವಾಗಿರುವ ಗ್ರಂಥಗಳಿಂದ ಮಾಹಿತಿ ಪಡೆಯಲಾಗಿದೆ. ಕೆರೆಗಳ ಏರಿ, ತೂಬು, ಕೋಡಿ, ಕಾಲುವೆ, ಕಟ್ಟೆ ಇವುಗಳ ಛಾಯಾಚಿತ್ರವನ್ನು ಸಂಗ್ರಹಿಸಲಾಗಿದೆ.

ಪ್ರಸ್ತುತ 'ಕಲಘಟಗಿ ತಾಲೂಕಿನ ಕೆರೆಗಳ ಅಧ್ಯಯನ' ಎಂಬ ಶೀರ್ಷಿಕೆಯ ಈ ಸಂಪ್ರಬಂಧವನ್ನು ಅಧ್ಯಯನದ ಅನುಕೂಲಕ್ಕಾಗಿ ಆರು ಅಧ್ಯಾಯಗಳನ್ನಾಗಿ ವಿಭಾಗಿಸಲಾಗಿದೆ.

**ಮೊದಲನೆಯ ಅಧ್ಯಾಯ** ಪ್ರಸ್ತುತ ಅಧ್ಯಾಯದಲ್ಲಿ ಪ್ರಸ್ತಾವನೆ, ಅಧ್ಯಯನದ ಉದ್ದೇಶ, ವ್ಯಾಪ್ತಿ, ಅಧ್ಯಯನದ ಸಮೀಕ್ಷೆ ಹಾಗೂ ಅಧ್ಯಯನದ ವಿಧಾನ ಇಲ್ಲಿ ಒಟ್ಟಾರೆ ಈ ಅಧ್ಯಾಯದ ರೂಪುರೇಷೆಯನ್ನು ವಿವರಿಸಲಾಗಿದೆ.

**ಎರಡನೆಯ ಅಧ್ಯಾಯ** ಈ ಅಧ್ಯಾಯದಲ್ಲಿ ಕಲಘಟಗಿ ತಾಲೂಕಿನ ಭೌಗೋಳಿಕ ಪರಿಚಯ ರಾಜಕೀಯ ಇತಿಹಾಸ ಹಾಗೂ ಚಾರಿತ್ರಿಕ ಹಿನ್ನೆಲೆಯನ್ನು ಪ್ರಸ್ತಾಪಿಸಲಾಗಿದೆ. ಭೌಗೋಳಿಕತೆಯಲ್ಲಿ ಕಲಘಟಗಿ ತಾಲೂಕಿನ ಜನಸಂಖ್ಯೆ, ಜಾತಿ ಜನಾಂಗ, ಬೆಟ್ಟ ಗುಡ್ಡ, ಅರಣ್ಯ ಸಂಪತ್ತು, ಮತ್ತು ಕೃಷಿ ಬೆಳೆಗಳ ಬಗ್ಗೆ ಮಾಹಿತಿ ನೀಡಲಾಗಿದೆ. ಅದೇರೀತಿ ಚಾರಿತ್ರಿಕ ಹಿನ್ನಲೆಯಲ್ಲಿ ತಾಲೂಕಿನಲ್ಲಿ ವಿವಿಧ ರಾಜಮನೆತನಗಳ ಆಳ್ವಿಕೆಯ ಅವಧಿಯಲ್ಲಿ ನಿರ್ಮಿಸಲಾದ ಕೆರೆಗಳ ಬಗ್ಗೆ ಶಾಸನದಲ್ಲಿ ಉಲ್ಲೇಖಿವಿರುವ ಕೆರೆಗಳ ಕುರಿತು ಅಧ್ಯಯನ ಮಾಡಲಾಗಿದೆ.

**ಮೂರನೆಯ ಅಧ್ಯಾಯ** ಪ್ರಸ್ತುತ ಅಧ್ಯಾಯದಲ್ಲಿ ಕೆರೆಗಳ ಉಗಮ, ಪರಂಪರೆ, ನಾಮಾವಳಿಗಳು, ವರ್ಗೀಕರಣ, ಮಾಹಿತಿಯ ಕುರಿತು ಅಧ್ಯಯನ ಮಾಡಲಾಗಿದೆ.

**ನಾಲ್ಕನೆಯ ಅಧ್ಯಾಯ** ಈ ಅಧ್ಯಾಯದಲ್ಲಿ ಕೆರೆ ನಿರ್ಮಾಣ, ನಿರ್ಮಾಣದ ಉದ್ದೇಶ, ಕೆರೆಗಳ ನಿರ್ಮಾಣಕ್ಕೆ ಅಗತ್ಯವಾದ ಅಂಶಗಳ ಕುರಿತು ಮತ್ತು ಕೆರೆಗಳನ್ನು ಕಟ್ಟಲು ತೆಗೆದುಕೊಳ್ಳಬೇಕಾದ ಮುನ್ನೆಚ್ಚರಿಕೆ ಕ್ರಮಗಳ ಕುರಿತು ಚರ್ಚಿಸಲಾಗಿದ್ದು, ಅದೇರೀತಿ ಕಲಘಟಗಿ ತಾಲೂಕಿನ ಪ್ರಮುಖ ಕೆರೆಗಳ ಕುರಿತು ಚರ್ಚಿಸಲಾಗಿದ್ದು, ಕೆರೆಗಳ ರಚನೆ ವಿಧಾನ ಮತ್ತು ತಾಂತ್ರಿಕತೆ ಬಗ್ಗೆ ವಿವರಿಸಲಾಗಿದೆ. ಕೆರೆಗೆ ಸಂಬಂಧಿಸಿದಂತೆ ಕೆಲವು ಮುಖ್ಯ ಭಾಗಗಳಾದ ಜಲಾನಯನ ಪ್ರದೇಶ, ಕೆರೆಗಳ ಅಂಗಳ, ಏರಿ ನಿರ್ಮಾಣ, ತೂಬು ರಚನೆ, ಕಾಲುವೆ ವ್ಯವಸ್ಥೆ, ಕೋಡಿಗಳು, ಕೆರೆಯ ನಿರ್ವಹಣೆಯ ಬಗ್ಗೆ ಶಾಸನಗಳ ಹಿನ್ನೆಲೆಯಲ್ಲಿ ವಿವರಿಸಲಾಗಿದೆ.

**ಐದನೆಯ ಅಧ್ಯಾಯ**ದಲ್ಲಿ ಕೆರೆಗಳಿಗೆ ಸಂಬಂಧಿಸಿದ ಕೆಲವು ನಂಬಿಕೆಗಳು ಮತ್ತು ಹಳ್ಳಿಗಳಲ್ಲಿ ಆಚರಿಸಲಾದ ಕೆಲವು ಆಚರಣೆ, ಹಬ್ಬಗಳ ಕುರಿತು ಅವುಗಳ ಬಗ್ಗೆ ಕ್ಷೇತ್ರಕಾರ್ಯದಲ್ಲಿ ವ್ಯಕ್ತಿಗಳಿಂದ ತಿಳಿದು ಬಂದ ಮಾಹಿತಿಯನ್ನು ಒದಗಿಸಲಾಗಿದೆ.

**ಆರನೆಯ ಅಧ್ಯಾಯ** ಈ ಅಧ್ಯಯನವು ಸಮಾರೋಪವಾಗಿದ್ದು, ಒಟ್ಟಾರೆ ಅಧ್ಯಯನದಲ್ಲಿ ಕಂಡುಕೊಂಡ ಫಲಿತಗಳನ್ನು ತಿಳಿಸಲಾಗಿದೆ. ಅಧ್ಯಯನದ ವಿಷಯಕ್ಕೆ ಪೂರಕವಾಗಿ ಭೇಟಿನೀಡಿದ ವಕ್ತೃಗಳ ವಿವರ, ನಕ್ಷೆಗಳು ಹಾಗೂ ಕ್ಷೇತ್ರಕಾರ್ಯದಲ್ಲಿ ತೆಗೆದಿರುವ ಪ್ರಮುಖ ಛಾಯಾಚಿತ್ರಗಳನ್ನು ಈ ಅಧ್ಯಯದಲ್ಲಿ ನೀಡಲಾಗಿದೆ.

## ಅಧ್ಯಾಯ –೨

# ಭೌಗೋಳಿಕತೆ ಮತ್ತು ಚಾರಿತ್ರಿಕ ಹಿನ್ನಲೆ

### ಪ್ರಸ್ತಾವನೆ

ಕರ್ನಾಟಕ ಇತಿಹಾಸ ಪುನರ್‌ಚನೆಯಲ್ಲಿ ಧಾರವಾಡ ಜಿಲ್ಲೆಯು ಮಹತ್ವದ ಸ್ಥಾನವನ್ನು ಪಡೆದುಕೊಂಡಿದೆ. ಈ ಪ್ರದೇಶದಲ್ಲಿ ಅನೇಕ ರಾಜವಂಶಗಳು ಅಂದರೆ ಬಾದಾಮಿ ಚಾಲುಕ್ಯರ ಕಾಲದಿಂದ ಹಿಡಿದು ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಕಲಚೂರಿ, ಹೊಯ್ಸಳರು, ವಿಜಯನಗರ ಅರಸರು ಜೊತೆಗೆ ಮಹಾಮಂಡಳೇಶ್ವರರಾದ ಗೋವಾ ಕದಂಬರು ಹಾಗೂ ಹಾನಗಲ್ಲು ಕದಂಬರು ಆಳ್ವಿಕೆ ನಡೆಸಿದ್ದಾರೆ. ಧಾರವಾಡ ಜಿಲ್ಲೆಗೆ ಸೀಮಿತವಾಗಿ ನೋಡಿದಾಗ ಜಿಲ್ಲೆಯಾದ್ಯಂತ ತಮ್ಮ ತಮ್ಮ ಆಳ್ವಿಕೆಗೆ ಒಳಪಡಿಸಿಕೊಂಡಿದ್ದ ವಿಷಯವನ್ನು ಶಾಸನಗಳ ಆಧಾರದಿಂದ ತಿಳಿಯಬಹುದು.

### ಭೌಗೋಳಿಕ ಪರಿಸರ

ಯಾವುದೇ ಒಂದು ಪ್ರದೇಶದ ಇತಿಹಾಸ ತಿಳಿದುಕೊಳ್ಳುವ ಆಯಾ ಪ್ರದೇಶದ ನೈಸರ್ಗಿಕ ವಿವರಗಳ ಪ್ರಾಥಮಿಕ ಅರಿವು ಇರುವುದು ಅತೀ ಮುಖ್ಯವೆನಿಸುತ್ತದೆ. ಇತಿಹಾಸವನ್ನು ಕಂಡುಕೊಡುವಲ್ಲಿ ಭೌಗೋಳಿಕ ಅಂಶಗಳು ಬಹುಮುಖ್ಯ ಸಾಮಗ್ರಿಗಳಾಗಿ ಪರಿಗಣಿತವಾಗುತ್ತವೆ. ಅಲ್ಲದೇ ಆಯಾ ಪ್ರದೇಶದ ಭೌತಿಕ ವಿಚಾರಗಳು ಆ ಪ್ರದೇಶದಲ್ಲಿರುವ ಜನ ಜೀವನ ಮತ್ತು ಸಾಂಸ್ಕೃತಿಕ ಬದುಕನ್ನು ತಿಳಿದುಕೊಳ್ಳುವಲ್ಲಿ ಸಹಕಾರಿಯಾಗಿತ್ತವೆ. ಸ್ಥೂಲವಾಗಿ ವಿವೇಚಿಸುವುದಾದರೆ ಒಂದು ನಿರ್ದಿಷ್ಟಪಡಿಸಿದ ಭೌತಿಕ ಮೇರೆಗಳನ್ನು ಹಾಗೂ ಅಲ್ಲಿರುವ ನದಿಕೊಳ್ಳ, ಬೆಟ್ಟಗುಡ್ಡ, ಗಿಡ–ಮರ, ಪ್ರಾಣಿ–ಪಕ್ಷಿಗಳು ಹಾಗೂ ಖನಿಜ ಸಂಪತ್ತಿನ ವಿವರಗಳನ್ನು ತಿಳಿಯುವುದರ ಮೂಲಕ ಇತಿಹಾಸವನ್ನು ಇನ್ನು ಗಟ್ಟಿಯಾಗಿ ಕಟ್ಟಿಕೊಡಬಹುದಾಗಿದೆ[೧].

ಒಂದು ಪ್ರದೇಶವು ರಾಜಕೀಯವಾಗಿ ಹೆಚ್ಚು ಅಭಿವೃದ್ಧಿ ಹೊಂದಲು ಅಥವಾ ಹೊಂದದಿರಲು ಅಲ್ಲಿನ ಭೌಗೋಳಿಕ ಅಂಶಗಳು ತುಂಬಾ ಪ್ರಭಾವ ಬೀರುತ್ತವೆ. ಆಯಾ ಪ್ರದೇಶದ ಜನರ ಜೀವನವನ್ನು ರೂಪಿಸುವಲ್ಲಿ ಭೌಗೋಳಿಕ ಪರಿಸರದ ಪಾತ್ರ ಪ್ರಮುಖವಾಗಿದೆ. ಪ್ರಾಚೀನ ನಾಗರೀಕತೆಗಳ ಉಗಮ ಮತ್ತು ವಿಕಾಸ ಭೌಗೋಳಿಕ ಸಂಪನ್ಮೂಲ ದೊರಕುವ ನಾಗರೀಕತೆಗಳು ರೂಪಿತಗೊಂಡಿರುವುದನ್ನು ಗಮನಿಸಿದಾಗ ಈ ಹಿನ್ನೆಲೆಯಲ್ಲಿ ಕಲಘಟಗಿ ಪ್ರದೇಶದ ಪ್ರಾಮುಖ್ಯತೆಯನ್ನು ತಿಳಿಯಬಹುದು.

## ಮೇಲ್ಮೈ ಲಕ್ಷಣ

ಕಲಘಟಗಿ ತಾಲೂಕು ಪ್ರದೇಶ ಜಿಲ್ಲೆಯ ದಕ್ಷಿಣ ಭಾಗಕ್ಕಿದ್ದು, ಪೂರ್ವ ರೇಖಾಂಶ ೭೪°-೪೯ ರಿಂದ ೭೫°-೦೯ ಮತ್ತು ಉತ್ತರ ಅಕ್ಷಾಂಶ ೧೫°-೦೨ ರಿಂದ ೧೫°-೨೧ ಅಕ್ಷಾಂಶಗಳ ಮಧ್ಯದಲ್ಲಿ ನೆಲೆಗೊಂಡಿದ್ದು ಇದು ಒಟ್ಟು ೬೮೨.೮ ಚ.ಕಿ.ಮೀ. ಭೌಗೋಳಿಕ ವಿಸ್ತೀರ್ಣವನ್ನು ಹೊಂದಿದೆ. ಇದು ಸಮುದ್ರಮಟ್ಟದಿಂದ ೭೧೯ ಮೀ. ಎತ್ತರದಲ್ಲಿದೆ. ಈ ತಾಲೂಕಿನಲ್ಲಿ ಒಟ್ಟು ಎಂಬತ್ತೇಳು ಗ್ರಾಮಗಳಿವೆ. ಆಡಳಿತ ಅನುಕೂಲಕ್ಕಾಗಿ ಮೂರು ಹೋಬಳಿಗಳಾಗಿ ವಿಂಗಡಿಸಿದ್ದಾರೆ[೨]. ಅವುಗಳೆಂದರೆ, ಕಲಘಟಗಿ, ತಬಕದಹೊನ್ನಳ್ಳಿ, ದುಮ್ಮವಾಡ ಹೋಬಳಿಗಳಾಗಿವೆ. ಇದು ಧಾರವಾಡ ಪ್ರದೇಶದಿಂದ ದಕ್ಷಿಣ ಭಾಗಕ್ಕಿದ್ದು, ಇದರ ಮೇರೆಗಳಾಗಿ ಪೂರ್ವದಲ್ಲಿ ಹುಬ್ಬಳ್ಳಿ, ಕುಂದಗೋಳ ಮತ್ತು ಶಿಗ್ಗಾವ, ಪಶ್ಚಿಮದಲ್ಲಿ ಹಳಿಯಾಳ ಮತ್ತು ಯಲ್ಲಾಪುರ, ದಕ್ಷಿಣದಲ್ಲಿ ಮುಂಡಗೋಡ, ಉತ್ತರದಲ್ಲಿ ಧಾರವಾಡ ತಾಲೂಕುಗಳಿವೆ.

## ಹವಾಗುಣ ಮಳೆ

ಕಲಘಟಗಿ ತಾಲೂಕು ಮಲೆನಾಡು ಮತ್ತು ಪೂರ್ವದ ಬೆಳವಲದ ನಾಡುಗಳ ಮಧ್ಯ ಇರುವ ಗಡಿನಾಡು ಪ್ರದೇಶದಿಂದ ಕೂಡಿವೆ. ಇಲ್ಲಿನ ಹವೆ ಸಾಮಾನ್ಯವಾಗಿ ಸಮಶೀತೋಷ್ಣವಾಗಿದ್ದು, ಆರೋಗ್ಯಕ್ಕೆ ಒಳ್ಳೆಯದಾಗಿರುತ್ತದೆ. ಸಾಮಾನ್ಯವಾಗಿ ಬೇಸಿಗೆಯಲ್ಲಿ ಬಿಸಿಲು ಪೂರಕವಾಗಿದ್ದು, ಮಳೆಗಾಲದಲ್ಲಿ ಮಳೆ ಹೆಚ್ಚು ಇಲ್ಲಿನ ಅತೀ ಹೆಚ್ಚಿನ ಉಷ್ಣತೆ ಎಂದರೆ ೪೦°ಸೆಂಟಿಗ್ರೇಡ್ ಆಗಿರುವುದು ತಾಲೂಕಿನಲ್ಲಿ ವಾಡಿಕೆಯಂತೆ ವಾರ್ಷಿಕವಾಗಿ ಮಳೆ ಪ್ರಮಾಣ ೬೬೮.೬ ಮಿ.ಮೀಗಳು ವಾಸ್ತವಿಕ ಸರಾಸರಿ ಮಳೆಯ ಪ್ರಮಾಣ ೯೨೩.೬ಮಿ.ಮೀ ಆಗಿದೆ. ಅಕ್ಟೋಬರ್-ನವಂಬರ್ ಮತ್ತು ಡಿಸೆಂಬರ್ ತಿಂಗಳಿನಲ್ಲಿ ಬೇಸಿಗೆ ಸ್ವಲ್ಪ ಗಾಳಿ ತೀವ್ರವಾಗಿರುವುದು ಬೇಸಿಗೆಯ ನಂತರದ ಅವಧಿಯಲ್ಲಿ ಸಿಡಿಲು ಬಿರುಗಾಳಿಯೊಂದಿಗೆ ಭಾರಿಮಳೆ ಬೀಳುವುದುಂಟು, ಬೇಸಿಗೆಯಲ್ಲಿ ಗಾಳಿಯ ಪ್ರಮಾಣ ಹೆಚ್ಚುತ್ತಾ ಹೋಗುತ್ತದೆ. ಈ ಪ್ರದೇಶದಲ್ಲಿ ಮಳೆಯು ಹೆಚ್ಚಾಗಿ ಬೀಳುವುದರಿಂದ ಕಲಘಟಗಿ ತಾಲೂಕಿನ ದೇವಿಕೊಪ್ಪ ಬಳಿಯ ದೊಡ್ಡಕೆರೆ ೪೩೩ ಎಕರೆ ಕೆರೆಯು ತುಂಬುವುದು ಸಹಜವಾಗಿದೆ[೩]. ಇಂಥ ಹಿತಕರ ಹವಾಗುಣದಲ್ಲಿ ಕಲಘಟಗಿಯ ಕಲಾವಿದರು ತಂಪಾಗಿ ಹೊರಸೂಸುವ ಗಾಳಿಯನ್ನು ಉಂಟುಮಾಡುವ ಮಳೆ, ಫಲವತ್ತಾದ ಭೂಮಿ, ಅರಣ್ಯ ಸಮೃದ್ಧಿಯಲ್ಲಿ ಬೆಳೆಯುವ ಇತರ ಬೆಳೆ ಭತ್ತ, ಹತ್ತಿ, ಗೋಧಿ, ಜೋಳ ಮುಂತಾದ ಬೆಳೆಗಳಾಗಿವೆ.

## ಮಣ್ಣು ಮತ್ತು ಬೆಳೆ

ಈ ಜಿಲ್ಲೆಯ ಮಣ್ಣು ಎಲ್ಲಾ ಪ್ರಕಾರದ ವಿಭಜಿತ ಮಿಶ್ರಣದಿಂದ ಕೂಡಿಕೊಂಡಿದೆ. ಅದರೀತಿ ಕಲಘಟಗಿ ತಾಲೂಕಿನ ಎಲ್ಲಾ ಪ್ರದೇಶದಲ್ಲಿ ಕಂದು ಭೂಮಿ ಕಂಡುಬಂದರೆ, ಕೇಲವು ಪ್ರದೇಶಗಳಲ್ಲಿ ಗರಸಿನ ಭೂಮಿಯಿದೆ. ಜಿಲ್ಲೆಯ ಪಶ್ಚಿಮ ಭಾಗವು ಅನೇಕ ಬೆಟ್ಟಗುಡ್ಡಗಳಿಂದ ಕೂಡಿದ್ದು ಪ್ರಮುಖವಾಗಿ ಬೂದನಗುಡ್ಡದ ಸಾಲಿನ ದಕ್ಷಿಣೋತ್ತರವಾಗಿ ಬಯಲು ನಾಡಿನ ವ್ಯಾಪ್ತಿಗೆ ಒಳಪಟ್ಟಿದೆ. ಈ ಪರಿಸರದಲ್ಲಿ ಸಸ್ಯವರ್ಗವು ಅತ್ಯಂತ ವಿರಳವೆಂದು ಹೇಳಬಹುದು. ತಾಲೂಕಿನಲ್ಲಿ ಮಳೆಯ ಪ್ರಮಾಣ ಕಡಿಮೆಯಿರುವ ಬಯಲುಸೀಮೆಯಾಗಿದೆ. ಇಲ್ಲಿ ಹತ್ತಿ, ಗೋಧಿ, ಕಬ್ಬು, ಗೋವಿನ ಜೋಳ ಮೆಣಸಿನಕಾಯಿ, ಜೋಳ ಮುಂತಾದ ಏಕದಳಧಾನ್ಯ ಮತ್ತು ದ್ವಿದಳಧಾನ್ಯಗಳನ್ನು ಬೆಳೆಗಳು ಕಂಡುಬರುತ್ತವೆ[೪].

## ಅರಣ್ಯ ಸಂಪತ್ತು ಮತ್ತು ನದಿ ಬೆಟ್ಟಗಳು

ಅರಣ್ಯ ಇಲಾಖೆಯ ವರದಿಯ ಪ್ರಕಾರ ಕಲಘಟಗಿ ಅರಣ್ಯ ೧೯.೫೨೬ ಚ.ಕಿ.ಮೀ.ಪ್ರದೇಶದಲ್ಲಿ ಹರಡಿದೆ. ಇದು ೨೦೧೨-೧೩ ನೆಯ ಸಾಲಿನ ವರದಿಯಾಗಿವೆ. ಈ ತಾಲೂಕಿನ ಪ್ರಮುಖ ಬೆಟ್ಟಗಳೆಂದರೆ ಕಲಘಟಗಿ, ಹುಬ್ಬಳ್ಳಿ, ತಾಲೂಕಿನ ಮಧ್ಯದಲ್ಲಿ ದಕ್ಷಿಣೋತ್ತರವಾಗಿ ಸುಮಾರು ಎಂಟು ಮೈಲು ಉದ್ದ ಒಂದು ಮೈಲಿಯಷ್ಟು ಅಗಲ ಹರಡಿರುವ ಸಣ್ಣ-ಸಣ್ಣ ಕುರುಚಲು ಕಾಡಿನಿಂದ ಆವರಿಸಿರುವ ಬೂದುನಗುಡ್ಡ, ಹುಬ್ಬಳ್ಳಿ ಹತ್ತಿರ ಪೂರ್ವ ಪಶ್ಚಿಮವಾಗಿ ಹಬ್ಬಿರುವ ಉಣಕಲ್ಲಗುಡ್ಡ (ನೃಪತುಂಗ ಬೆಟ್ಟ), ಧಾರವಾಡ ಹುಬ್ಬಳ್ಳಿ ಮಧ್ಯದಲ್ಲಿ ಹಬ್ಬಿರುವ ರಾಯಾಪುರಗುಡ್ಡದ ಸಾಲುಗಳು ಈ ತಾಲೂಕಿನ ಪ್ರಮುಖ ಬೆಟ್ಟಗುಡ್ಡಗಳಾಗಿವೆ[೫].

ಈ ತಾಲೂಕಿನಲ್ಲಿ ಯಾವ ನದಿಗಳು ಹುಟ್ಟುವುದಿಲ್ಲ, ಆದರೆ ಕೇವಲ ಹಳ್ಳ ತೊರೆಗಳಿವೆ. ಧಾರವಾಡ ಜಿಲ್ಲೆಗೆ ಸಂಬಂದಿಸಿದಂತೆ ಈ ತಾಲೂಕಿನ ಪಶ್ಚಿಮದ ಗಡಿಯಾದ ಧಾರವಾಡ ಮತ್ತು ಕಲಘಟಗಿಯ ನಡುವೆ ಬೇಡ್ತಿ ನದಿ ಹರಿಯುತ್ತದೆ. ಧಾರವಾಡ ಸಮೀಪದ ಸೋಮೇಶ್ವರ ಎಂಬಲ್ಲಿ ಹುಟ್ಟುವ ಶಾಲ್ಮಲಾ, ಬೇಡ್ತಿ ನದಿಯ ಉಪನದಿಯಾಗಿದೆ. ಇದು ಧಾರವಾಡ ತಾಲೂಕಿನಲ್ಲಿ ಉಗಮಿಸುತ್ತದೆ. ಕಲಘಟಗಿಯ ಬಳಿ ಸಂಗದೇವರಕೊಪ್ಪದಲ್ಲಿ ಇವುಗಳು ಸಂಗಮವಾಗುತ್ತವೆ. ಹುಬ್ಬಳ್ಳಿ-ಧಾರವಾಡ ಅವಳಿ ನಗರಗಳಿಗೆ ಕುಡಿಯುವ ನೀರನ್ನು ಈ ನದಿಗಳಿಂದ ಸರಬರಾಜು ಮಾಡಲಾಗುತ್ತಿದೆ. ಆದರೆ ಇದು ಅರೆಮಲೆನಾಡು ಪ್ರದೇಶವಾದರೂ ಇಲ್ಲಿ ಮಳೆಯು ಹೆಚ್ಚಿನ ಪ್ರಮಾಣದಲ್ಲಿ ಬೀಳುತ್ತದೆ.

ಈ ಕಲಘಟಗಿ ತಾಲೂಕಿನಲ್ಲಿ ಹೇಳಿಕೊಳ್ಳುವಂತಹ ದಟ್ಟವಾದ ಅರಣ್ಯ ಪ್ರದೇಶ ಇಲ್ಲದಿದ್ದರೂ ಸಹ ಕಲಘಟಗಿ ಪ್ರದೇಶಕ್ಕೆ ಹೊಂದಿಕೊಂಡಂತಹ ಅಡವಿ ವಿರಳವಾಗಿದ್ದು ಸಾಗವಾನಿ, ಶ್ರೀಗಂಧ, ಹೊನ್ನೆ, ಮತ್ತಿ, ಹಲಸು ಮುಂತಾದ ಬೆಲೆಬಾಳುವ ಮರಗಳು ಬೆಳೆಯುತ್ತವೆ. ಇಂತಹ ಮರಗಳು ಸ್ಥಳೀಯವಾಗಿ ದೊರಕುವುದರಿಂದ ಕಲಘಟಗಿ ಕಲಾವಿದರಿಗೆ ಹೆಚ್ಚು ಮರದಿಂದ ಪೀಠೋಪಕರಣಗಳನ್ನು ತಯಾರಿಸಲು ಅನುಕೂಲವಾಗಿದೆ. ಈ ಕಲಾವಿದರು ಬಳಸುವ ಕಟ್ಟಿಗೆಯಿಂದ ರೂಪುಗೊಂಡ ತೊಟ್ಟಿಲುಗಳು ಪ್ರಸಿದ್ದಿ ಪಡೆದಿವೆ, ಹಾಗೆಯೇ ಇದೆ ಮರದಿಂದ ದೇವಿಯ ಮೂರ್ತಿ ಶಿಲ್ಪಗಳ ನಿರ್ಮಾಣ ಮಾಡುತ್ತಾರೆ ಹಾಗೂ ಅನೇಕ ಆಟಿಕೆ ಗೊಂಬೆಗಳನ್ನು ಮರದಿಂದಲೇ ನಿರ್ಮಾಣ ಮಾಡುವ ಕಲಾವಿದರಿದ್ದಾರೆ. ಅರಣ್ಯಸಂಪತ್ತು ಮುಂದುವರಿಯುವಿಕೆ ಮತ್ತು ಆಧಾರಪೂರ್ಣ ಪ್ರತಿಫಲ, ಈ ತತ್ವಗಳನ್ನು ಅವಲಂಬಿಸಿ ವ್ಯವಸ್ಥಿತವಾಗಿ ಉಪಯೋಗಿಸಲ್ಪಡುತ್ತದೆ. ಹೀಗೆ ಮಾಡುವಾಗ ಅರಣ್ಯವನ್ನು ಅವಲಂಬಿಸಿದ ಕೈಗಾರಿಕೆಗಳ ಬೇಡಿಕೆಗಳನ್ನು ಪೂರೈಸುವುದು ನೈಸರ್ಗಿಕ ಪುನರುತ್ಪತ್ತಿ ಕಾಡನ್ನು ಪೂರ್ವ ಸ್ಥಿತಿಯಲ್ಲಿ ಸ್ಥಾಪಿಸುವುದು, ಮತ್ತು ವನ ನಿರ್ಮಾಣ ಮಾಡುವುದು ಇವುಗಳನ್ನು ಉತ್ತೇಜಿಸಲಾಗುವುದು. ಬಗೆ-ಬಗೆಯ ಅರಣ್ಯ ಉತ್ಪತ್ತಿಗಳು ಹೊರತೆಗೆಯಲ್ಪಟ್ಟ ಬೇರೆ-ಬೇರೆ ಕೈಗಾರಿಕೆಗಳಿಗೆ ಅವು ಒದಗಿಸಲು ಅನುಕೂಲವಾಗಿವೆ. ಇಲ್ಲಿ ದೊರಕುವ ಮರಗಳ ತುಂಡುಗಳು ಕಲಘಟಗಿಯ ಕಲಾವಿದರಿಗೂ ಸಹ ಉಪಯುಕ್ತವಾಗಿವೆ. ಹಾಗೇ ಬೀಟೆ, ತೇಗ, ಹೊನ್ನಿ ಮತ್ತು ನಂದಿ ಮುಂತಾದ ಮರಗಳು ನೈಸರ್ಗಿಕವಾಗಿಯೇ ಬೆಳೆಯುವ ಈ ಮರ ಮುಟ್ಟಿನ ಉತ್ಪತ್ತಿಗೆ ಮತ್ತು ಆಡಳಿತಾತ್ಮಕ ದೃಷ್ಟಿಕೋನದಿಂದಲೂ ಮಹತ್ವದ್ದಿವೆ. ಶ್ರೀಗಂಧ, ಚೌಬೀನ, ನೀಲಗಿರಿ, ಬಿದಿರು ಮತ್ತು ಇತರ ಮರಗಳಿದ್ದು, ವಿವಿಧ ಕೈಗಾರಿಕೆಗಳಿಗೆ ಸಹಾಯಕವಾಗಿವೆ.

**ಜನಸಂಖ್ಯೆ**

ಕಲಘಟಗಿ ತಾಲೂಕಿನ ಜನಸಂಖ್ಯೆಯಲ್ಲಿ ಪ್ರತಿ ಚದರ ಕಿ.ಮೀ.ಗೆ ೧೭೭ ಜನಸಾಂದ್ರತೆಯನ್ನು ಹೊಂದಿದ್ದು ಕಂಡುಬಂದಿದೆ. ಈ ಪರಿಸರದಲ್ಲಿ ಸಾಮಾನ್ಯವಾಗಿ ಎಲ್ಲಾ ಜಾತಿಯವರು ಇದ್ದು, ತಮ್ಮ ತಮ್ಮ ಕುಲಕಸುಬುಗಳನ್ನು ಅಳವಡಿಸಿಕೊಂಡು ಬಂದಿರುವುದು ಕಾಣಬಹುದು. ಕೆಲವರು ತಮ್ಮ ಮೂಲ ಕಸಬು ಬಿಟ್ಟು ಬೇರೆ-ಬೇರೆ ಉದ್ಯೋಗಗಳಲ್ಲಿ ತೊಡಗಿರುವುದು ಕೂಡ ಕಂಡುಬಂದಿದೆ. ಈ ಪರಿಸರದಲ್ಲಿ ಕಂಡುಬರುವ ಜನಾಂಗದವರೆಂದರೆ, ಲಿಂಗಾಯತರು, ಮುಸ್ಲಿಮರು, ಕುರುಬರು, ಅಕ್ಕಸಾಲಿಗರು, ಬಡಿಗೇರರು, ಕುಂಬಾರರು, ವೈಶ್ಯರು, ಜೈನರು, ಹರಿಜನರು ಪ್ರಧಾನವಾಗಿ ನಾವು ಇಲ್ಲಿ ಗಮನಿಸಬಹುದಾಗಿದೆ. ಕಲಘಟಗಿಯಲ್ಲಿ ತೊಟ್ಟಿಲು ತಯಾರಿಸುವವರು, ಮರಾಠಿ ಜನಾಂಗದವರು ಇಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ[೬].

## ವಾಣಿಜ್ಯ ವ್ಯಾಪಾರ

ಕಲಘಟಗಿಯ ವಾಣಿಜ್ಯ ವ್ಯಾಪಾರವು ಹಿಂದಿನಿಂದಲೂ ಹುಬ್ಬಳ್ಳಿಯನ್ನು ಅವಲಂಬಿಸಿದ್ದು, ಈಗಲೂ ಹುಬ್ಬಳ್ಳಿಯನ್ನೇ ಅವಲಂಬಿಸಿದೆ. ಮೊದಲಿಗೆ ಹುಬ್ಬಳ್ಳಿಯನ್ನು 'ಛೋಟಾ ಮುಂಬೈ' ಎಂದು ಕರೆಯುತ್ತಿದ್ದರು. ಆ ಮಾತು ಇಂದಿಗೂ ಅನ್ವಯಿಸುತ್ತದೆ. ಕ್ರಿ.ಶ. ೧೬೫೦-೬೦ ರ ಸುಮಾರಿಗೆ ಹುಬ್ಬಳ್ಳಿಯಲ್ಲಿ ತಯಾರಾದ ಮಸ್ಲಿನ್ ಬಟ್ಟೆಯು ಕಾರವಾರ ಬಂದರಿನ ಮೂಲಕ ವಿದೇಶಗಳಿಗೆ ದೊಡ್ಡ ಮಟ್ಟದಲ್ಲಿ ರಫ್ತಾಗುತ್ತಿತ್ತು[೭]. ಕಾರವಾರದ ಇಂಗ್ಲೀಷ್ ಕಂಪನಿಗೆ ಇಲ್ಲಿಂದ ವಸ್ತುಗಳನ್ನು ಸಂಗ್ರಹಿಸಲಾಗುತ್ತಿತ್ತು. ಮಧ್ಯಕಾಲದಲ್ಲಿ ಹುಬ್ಬಳ್ಳಿಯಿಂದ ಗೋವಾಗೆ ಹಸ್ತಿದಂತ, ಗಂಧದ ಕೆತ್ತನೆ ವಸ್ತುಗಳು ಇದ್ದಿರಬಹುದು. ವಿಜಯನಗರ ಅರಸರು ಪೋರ್ಚುಗೀಸರೊಂದಿಗೆ ನಡೆಸುವ ವ್ಯಾಪಾರ ಈ ನಗರದ ಮೂಲಕ ಸಾಗುತ್ತಿತ್ತು. ಹಿಂದಿನಂತೆ ಇಂದಿಗೂ ಹುಬ್ಬಳ್ಳಿ ಚಿನ್ನ, ಬೆಳ್ಳಿ ವ್ಯಾಪಾರದ ಪ್ರಮುಖ ಕೇಂದ್ರವಾಗಿದೆ.

ಇಲ್ಲಿ ರಫ್ತಾಗುವ ವಸ್ತುಗಳಲ್ಲಿ ಹತ್ತಿ ಮತ್ತು ಸಿದ್ದಪಡಿಸಿದ ಉಡುಪುಗಳು, ಇಂಜನಿಯರಿಂಗ್ ವಸ್ತುಗಳು, ಯಂತ್ರಗಳು, ಶಸ್ತ್ರಚಿಕಿತ್ಸೆಗೆ ಉಪಯೋಗಿಸುವ, ಔಷಧಿಗಳು, ಮೆನಸಿಕಾಯಿ, ಈರುಳ್ಳಿ ಮುಂತಾದವುಗಳು ಬಹುಮುಖ್ಯವಾದವು. ಮುಂಬೈನಿಂದ ಕೊಬ್ಬರಿಎಣ್ಣೆ, ಪೆಟ್ರೋಲ್, ಮಂಗಳೂರಿನಿಂದ ಸೀಮೆಎಣ್ಣೆ, ಗೋವಾದಿಂದ ಅಡಿಕೆ, ಮೆಣಸು, ಏಲಕ್ಕಿ, ಶಿರ್ಸಿಯಿಂದ ಎಲೆ ಇನ್ನೂ ಮುಂತಾದವುಗಳಿಂದ ಹುಬ್ಬಳ್ಳಿಯು ಪ್ರಮುಖ ವ್ಯಾಪಾರ ಕೇಂದ್ರವಾಗಿತ್ತು.

## ಸಾರಿಗೆ ಸಂಪರ್ಕ

ಬ್ರಿಟಿಷರ ಆಳ್ವಿಕೆ ಪ್ರಾರಂಭವಾದ ಈ ಭಾಗದಲ್ಲಿ ಸಾರಿಗೆ ಸಂಪರ್ಕ ಅಭಿವೃದ್ಧಿಗೊಂಡವು. ೧೮೮೨-೮೭ ರಲ್ಲಿ ಪ್ರಾರಂಭವಾದ ಪೂನಾ-ಬೆಂಗಳೂರು ರೈಲ್ವೆ ಮಾರ್ಗವು ಈ ತಾಲೂಕಿನ ಸಂಪರ್ಕವನ್ನು ಇತರ ರಾಜ್ಯಗಳೊಂದಿಗೆ ಕಲ್ಪಿಸಿದೆ. ೧೯೨೧-೨೨ ರಲ್ಲಿ ಪ್ರಾರಂಭವಾದ ಸಾರ್ವಜನಿಕ ಮೋಟಾರು ವಾಹನಗಳ ಸಂಚಾರ ಸಂಪರ್ಕ ವ್ಯವಸ್ಥೆಯಲ್ಲಿ ಗಣನೀಯ ಬದಲಾವಣೆಗಳನ್ನು ತಂದಿತು. ಈ ತಾಲೂಕಿನಲ್ಲಿ ಹಾದು ಹೋಗುವ ಪ್ರಮುಖ ರಾಷ್ಟ್ರೀಯ ಹೆದ್ದಾರಿ ಹಾಗೆ ಹುಬ್ಬಳ್ಳಿ, ಕಾರವಾರ, ಸೊಲ್ಲಾಪುರ, ಗೋವಾ ಮುಂತಾವುಗಳನ್ನು ಕಲಘಟಗಿಯ ಪ್ರದೇಶಕ್ಕೆ ಹುಬ್ಬಳ್ಳಿಯ ಹತ್ತಿರವಿರುವುದರಿಂದ ಸಾರಿಗೆ ಸಂಪರ್ಕ, ವಾಣಿಜ್ಯ ವ್ಯಾಪಾರ ಇನ್ನೂ ಮುಂತಾದವುಗಳು ಇಂದಿಗೂ ಹುಬ್ಬಳ್ಳಿಯನ್ನು ಅನುಸರಿಸುವುದಾಗಿದೆ. ದಕ್ಷಿಣ ಮಧ್ಯ ರೈಲ್ವೆ ವಲಯ ಪ್ರಮುಖವಾಗಿದ್ದು, ಇಲ್ಲಿಂದ ಮುಂಬೈ, ಗೋವಾ, ಬೆಂಗಳೂರು, ಸೋಲ್ಲಾಪುರ, ವಿಜಯವಾಡ ಮುಂತಾದ ಪ್ರದೇಶಗಳಿಗೆ ೧೯೦೭ರಲ್ಲಿ ಮೊಟ್ಟಮೊದಲಿಗೆ ಸಾರಿಗೆ ಸಂಪರ್ಕವನ್ನು

ಕಟ್ಟಲಾಯಿತು. ೧೯೫೩ರಿಂದ ತಾಲೂಕಿನಲ್ಲಿ ಸಾರಿಗೆ ವ್ಯವಸ್ಥೆ ಪ್ರಾರಂಭವಾಯಿತು[೮]. ಇಂದಿಗೂ ಕಲಘಟಗಿ ತಾಲೂಕಿನ ಜನರು ಹುಬ್ಬಳ್ಳಿಯನ್ನೇ ಅವಲಂಬಿಸಿದ್ದಾರೆ.

**ಕಲಘಟಗಿ ತಾಲೂಕಿನ ಅಂಕಿ ಅಂಶಗಳ ನೋಟ**

| | | |
|---|---|---|
| ಗ್ರಾಮ ಪಂಚಾಯತ್‌ಗಳು | – | ೨೮ |
| ಹೊಬಳಿಗಳು | – | ೩ |
| ನಗರಗಳು | – | ೧ |
| ಜನವಸತಿ ಇರುವ ಪ್ರದೇಶಗಳು | – | ೮೨ |
| ಶಹರ ಪಂಚಾಯತ್ | – | ೦೧ |
| ಪೊಲೀಸ್ ಠಾಣೆ | – | ೦೧ |
| ಅಗ್ನಿ ಶಾಮಕ ಠಾಣೆ | – | ೦೧ |

**ರಾಜಕೀಯ ಇತಿಹಾಸ**

**ಮೌರ್ಯರು**

ಭಾರತದ ಮೊಟ್ಟಮೊದಲ ಸಾಮ್ರಾಜ್ಯವಾಗಿ ಪ್ರಖ್ಯಾತವಾದ ಮೌರ್ಯ ಸಾಮ್ರಾಜ್ಯವು ಭಾರತದಾದ್ಯಂತ ಆಳ್ವಿಕೆಯು ವ್ಯಾಪಿಸಿದೆ. ಕರ್ನಾಟಕ ಚರಿತ್ರೆ ಪ್ರಾರಂಭವಾಗುವುದೇ ಮೌರ್ಯರ ಆದಿಯಾಗಿ ಅಶೋಕ ಶಾಸನಗಳು ಕರ್ನಾಟಕವನ್ನು ತಮ್ಮ ಆಡಳಿತದ ಒಂದು ಭಾಗವಾಗಿ ಮಾಡಿಕೊಂಡಿದ್ದರು ಎಂಬುದನ್ನು ಇಲ್ಲಿ ದೊರೆತ ಆತನ ಶಾಸನಗಳಿಂದ ಸ್ಪಷ್ಟವಾಗುತ್ತದೆ. ಕರ್ನಾಟಕದ ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿ, ಸಿದ್ದಾಪುರ ಮತ್ತು ಜಟಂಗಿ ರಾಮೇಶ್ವರ, ಬಳ್ಳಾರಿ ಜಿಲ್ಲೆಯ ನಿಟ್ಟೂರು ಮತ್ತು ಉದಯಗೋಳಂ, ಕೊಪ್ಪಳ ಜಿಲ್ಲೆಯ ಗವಿಮಠ ಮತ್ತು ಪಾಲ್ಕಿಗುಂಡು, ರಾಯಚೂರ ಜಿಲ್ಲೆಯ ಮಸ್ಕಿ, ಗುಲ್ಬರ್ಗ ಜಿಲ್ಲೆಯ ಚಿತ್ತಾಪುರ ತಾಲೂಕಿನ ಸನ್ನತಿಗಳಲ್ಲಿ ಶಾಸನಗಳು ಕಂಡುಬರುತ್ತವೆ[೯]. ಆದರೆ ಧಾರವಾಡ ಜಿಲ್ಲೆ ಹಾಗೂ ಕಲಘಟಗಿ ಪರಿಸರದಲ್ಲಿ ಮೌರ್ಯ ಸಾಮ್ರಾಜ್ಯದ ಯಾವುದೇ ಶಾಸನಗಳು ಹಾಗೂ ಮೂಲಾಧಾರಗಳು ದೊರೆಯುವುದಿಲ್ಲ.

**ಶಾತವಾಹನರು**

ಮೌರ್ಯರ ಅವನತಿ ನಂತರ ದಕ್ಷಿಣ ಭಾರತದ ವಿಂದ್ಯಪರ್ವತ ನಾಡಿನಲ್ಲಿ ಶಾತವಾಹನರು ಏಳ್ಗೆ ಹೊಂದಿದರು. ಮೌರ್ಯರ ಸಾಮಂತರಾದ ಶಾತವಾಹನರು ಸ್ವತಂತ್ರ ಸಾಮ್ರಾಜ್ಯವನ್ನು ಸ್ಥಾಪಿಸಿದರು. ಭಾರತದವರೆಗೆ ವಿಸ್ತರಿಸಿದರು ಶಾತವಾಹನರ ಕಾಲದಲ್ಲಿ ಧಾರವಾಡ ಜಿಲ್ಲೆಯ ಶಿಗ್ಗಾಂವ, ಧಾರವಾಡ ತಾಲೂಕುಗಳಲ್ಲಿ ಇವರ ಕಾಲದ ಕುರುಹುಗಳು ದೊರೆತಿವೆ[೧೦]. ಈ ದೊರೆತ ದಾಖಲೆಗಳ ಹಿನ್ನೆಲೆಯಲ್ಲಿ ಕಲಘಟಗಿ ಪ್ರದೇಶವು ಕೂಡ ಶಾತವಾಹನರ ಆಳ್ವಿಕೆಗೆ ಒಳಪಟ್ಟಿರಬಹುದು ಎಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ.

**ಬನವಾಸಿ ಕದಂಬರು**

ಕರ್ನಾಟಕದ ರಾಜಮನೆತನವಾದ ಕದಂಬರು, ಶಾತವಾಹನರ ನಂತರ ಕರ್ನಾಟಕದಲ್ಲಿ ಏಳಿಗೆ ಹೊಂದಿ ದಕ್ಷಿಣ ಭಾರತದಲ್ಲಿ ಆಡಳಿತ ವ್ಯಾಪ್ತಿಯನ್ನು ವಿಸ್ತರಿಸಿದರು. ಇವರ ಕಾಲಘಟ್ಟದಲ್ಲಿ ಕುರುಹುಗಳು ನಾಡಿನಾದ್ಯಾಂತ ದೊರೆಯುತ್ತವೆ. ಅದೇ ರೀತಿಯಾಗಿ ಕಲಘಟಗಿ ತಾಲೂಕಿನ ಶೇಡಂಬಿಯಲ್ಲಿ ಗೋವೆ ಕದಂಬರ ಒಂದನೇಯ ಜಯಕೇಶಿಯ ಕ್ರಿ.ಶ. ೧೦೬೨ರ ದಾನಶಾಸನವು ದೊರೆಯುತ್ತದೆ[೧೧]. ಹಾಗೂ ಸಂಗಮೇಶ್ವರದ ಕ್ರಿ.ಶ. ೧೦೬೮ರ ಶಾಸನ[೧೨] ಬನವಾಸಿ ಪುರವರಾಧೀಶ್ವರನಾದ ಜಯಕೇಶದೇವನು ಪಲಸಿಗೆ ಪನ್ನಿರ್ಚಾಸಿರ ಮತ್ತು ಕೊಂಕಣ-೫೦೦ನ್ನು ಆಳುತ್ತಿರುವಾಗ ಆತನ ಲಂಚಕಟ್ಟಿ ಗಾವುಂಡ ಪೂರ್ವೋಕ್ತ ದಿನದಂದು ಬಳ್ಳಿಗಟ್ಟಿ ದಿನದಂದು ಕೆರೆಯ ಕೆರೆಯ ಕೆಳಗೆ ಗುಣಿಗಮ ೨ಮತ್ತರು ಗದ್ದೆ ೧ ಖಂಡುಗ ಬೆಳೆಯ ಭೂಮಿಬಿಟ್ಟ ಉಲ್ಲೇಖವಿದೆ. ಪೇರ್ಮಾಡಿದೇವನ ಕಾಲದ ಕ್ರಿ.ಶ. ೧೧೪೨ರ ಹುಣಶೀಕಟ್ಟಿ ಶಾಸನದಲ್ಲಿ ಗದ್ದೆಯನ್ನು ದಾನಬಿಟ್ಟ ಉಲ್ಲೇಖವಿದೆ[೧೩]. ತಾಲೂಕಿನ ಮಡಕಿಹೊನ್ನಳ್ಳಿ ಗ್ರಾಮದ ಕ್ರಿ.ಶ. ೧೧೫೮ರ ಶಾಸನದಲ್ಲಿ ಆದಿತ್ಯ ರುದ್ರಶಕ್ತಿ ಪಂಡಿತರಿಗೆ ನೀಡಿದ ದಾನ ಹಾಗೂ ಉರುಗೇಶ್ವರನಿಗೆ ಉಗುರಮೂನುರ್ವರಿಂದ ದಾನ ಮಾಡಿದ್ದನ್ನು ತಿಳಿಸುತ್ತದೆ[೧೪]. ಕ್ರಿ.ಶ. ೧೧೫೮ ಮಿಶ್ರಿಕೋಟೆ ಶಾಸನದಲ್ಲಿ ಮೂಕೇಶ್ವರ ದೇವರಿಗೆ ದಾನ ಬಿಟ್ಟ ಉಲ್ಲೇಖವಿದೆ[೧೫]. ಅದೇ ರೀತಿ ಹಾಳಶೀಗಿಕಟ್ಟಿ ಹಾಗೂ ಶೇಡಂಬಿಯ ಕ್ರಿ.ಶ. ೧೧೬೨-೧೧೬೪ರ ಶಾಸನಗಳು ತೆರಿಗೆ ಮತ್ತು ಭೂದಾನದ ಬಗ್ಗೆ ತಿಳಿಸುತ್ತವೆ[೧೬]. ಈ ತಾಲೂಕಿನ ಮತ್ತೊಂದು ಗ್ರಾಮವಾದ ಭಟ್ಟಿಕೊಪ್ಪದಲ್ಲಿ ಗೋವಾ ಕದಂಬರ ರಾಜ ಪೇರ್ಮಾಡಿದೇವನ ಕಾಲದ ಕ್ರಿ.ಶ. ೧೧೬೫ರ ಶಾಸನ[೧೭] ದಾನ ನೀಡಿದರ ಬಗ್ಗೆ ಮಾಹಿತಿ ನೀಡುತ್ತದೆ. ತಾಲೂಕಿನ ಹಸರಂಬಿ ಹಾಗೂ ಕಾಮಧೇನು ಗ್ರಾಮದಲ್ಲಿ ದೊರೆತ ೧೧೭೦-೧೧೭೧ರ ಶಾಸನಗಳು ಭೂದಾನದ ಬಗ್ಗೆ ವಿವರಿಸುತ್ತವೆ[೧೮]. ಇನೇ ಜಯಕೇಶಿ ಕಾಲದ ಮುತ್ತಗಿ ಗ್ರಾಮದ ಕ್ರಿ.ಶ. ೧೧೯೯ರ ಶಾಸನದಲ್ಲಿ ಭೂದಾನದ ವಿಷಯವಿದೆ. ಗೋವೆ ಕದಂಬರಿಗೆ

ಸಂಬಂಧಿಸಿದ ಕ್ರಿ.ಶ. ೧೧೫೪ರ ಸಿದ್ದನಹಳ್ಳಿ ಶಾಸನದಲ್ಲಿ ಯಾವುದೇ ರಾಜನ ಉಲ್ಲೇಖವಿಲ್ಲ. ಗೋವೆ ಕದಂಬರ ಕಾಲದ ಕೆಲವು ದಾನ ಶಾಸನಗಳು ಹಾಗೂ ವೀರಗಲ್ಲು ದೊರೆತಿವೆ. ಕ್ರಿ.ಶ. ೧೦೨೪ರ ಸಂಗಮೇಶ್ವರದ ವೀರಗಲ್ಲು ಶಾಸನದಲ್ಲಿ (ಹೆಸರು ಅಸ್ಪಷ್ಟವಿದೆ) ಗೋವಲದೇವನನ್ನು ಹೆಸರಿಸುತ್ತದೆ. ಈ ಕಾಲಕ್ಕೆ ಜೀವಿತದಲ್ಲಿದ್ದುದು ಗೂವಳದೇವ (ಜಯಕೇಶಿ ೧ನೇ ಪುತ್ರ) ನು ಈತನ ಬಂಟನು ಪಡೆವಲ ಬೇರ್ಮಚ್ಚನ ಅನುಜನ (ಹೆಸರು ಅಸ್ಪಷ್ಟ) ಯುದ್ಧದಲ್ಲಿ ಮಡಿದ ವಿಷಯವಿದೆ.

**ಹಾನಗಲ್ಲು ಕದಂಬರು**

ಗೋವಾ ಕದಂಬರಂತೆ ಹಾನಗಲ್ಲು ಕದಂಬರು ಸಹ ತಾವು ಮೂಲಕದಂಬ ಕುಲಕ್ಕೆ ಸೇರಿದವರೆಂದು ಹೇಳಿಕೊಂಡಿದ್ದಾರೆ. ಈಗಿನ ಹಾನಗಲ್ಲಿನ ಪ್ರಾಚೀನ ಹೆಸರು ಪಾನಂಗಲ್ಲು ಕದಂಬರ ರಾಜಧಾನಿಯಾಗಿತ್ತು. ಇವರಿಗೆ ಪಾನಂಗಲ್ಲು-೫೦೦ ನಾಡಿನ ಮೇಲೆ ಪರಿಪೂರ್ಣ ಅಧಿಕಾರವಿದ್ದಿತು. ಇವರು ಸಹ ಕಲ್ಯಾಣ ಚಾಲುಕ್ಯರ ಮಹಾಮಂಡಳೇಶ್ವರರಾಗಿ ಸುಮಾರು ಕ್ರಿ.ಶ ೧೧ನೆಯ ಶತಮಾನದ ಅಂತ್ಯದಿಂದ ೧೩ನೆಯ ಶತಮಾನದವರೆಗೆ ರಾಜ್ಯವಾಳಿದರು. ಚಿತ್ತಯ್ಯ ಈ ಮನೆತನದ ಮೂಲ ಪುರುಷನಾಗಿದ್ದಾನೆ. ಈ ವಂಶದ ಮಹಾಮಂಡಳೇಶ್ವರರಾದ ಶಾಂತಿವರ್ಮ, ತೈಲಪದೇವ, ತೈಲಪದೇವನ ಮೊಮ್ಮಗನಾದ ಕಾಮದೇವನ ಆಳ್ವಿಕೆಗೆ ಸಂಬಂಧಿಸಿದಂತಹ ಶಾಸನಗಳು ಈ ತಾಲೂಕಿನಲ್ಲಿ ಕಂಡುಬಂದಿವೆ. ಹಾನಗಲ್ಲು ಕದಂಬರ ರಾಜನಾದ ಶಾಂತಿವರ್ಮನ ಕಾಲದ ಕ್ರಿ.ಶ. ೧೦೮೨ರ ಮುಕ್ಕಲಿನ ಶಾಸನದಲ್ಲಿ ಗೋವಲದೇವನ ಸಾಮಂತ ಅರಸನಾದ ಶಾಂತಿವರ್ಮದೇವನು ಹಾನಗಲ್ಲು-೫೦೦ರನ್ನು ಬರ್ಮಗಾವುಂಡನು ಶ್ರೀ ಬರ್ಮ್ಮೇಶ್ವರ ಖಂಡ ಸ್ಪುಟಿತ ಜೀರ್ಣೋದ್ಧಾರಕ್ಕೆಂದು ಒಂದು ಮತ್ತರು ಗದ್ದೆಯನ್ನು ಬಿಟ್ಟ ವಿಷಯವಿದೆ[೧೯].

ಧಾರವಾಡ ಜಿಲ್ಲೆಯ ಕಲಘಟಗಿ ತಾಲೂಕಿನಲ್ಲಿ ಮಾತ್ರ ಹಾನಗಲ್ಲು ಕದಂಬರ ಶಾಸನಗಳು ಲಭ್ಯವಾಗಿವೆ. ಗೋವಾ ಕದಂಬರ ಪ್ರಥಮ ಶಾಸನ ಕ್ರಿ.ಶ ೧೦೫೦ರಲ್ಲಿ ಕಲಘಟಗಿ ತಾಲೂಕಿನ ಕುಂದಲಿ ಗ್ರಾಮದಲ್ಲಿ ಕಂಡುಬಂದರೆ ಅದೇರೀತಿ ಹಾನಗಲ್ಲು ಕದಂಬರ ಕ್ರಿ.ಶ. ೧೦೮೨ರಲ್ಲಿ ಅದೇ ತಾಲೂಕಿನ ಮುಕ್ಕಲು ಎಂಬ ಗ್ರಾಮದಲ್ಲಿ ಕಂಡು ಬಂದಿದೆ. ಗೋವಾ ಕದಂಬರ ಜೊತೆಗೆ ಹಾನಗಲ್ಲು ಕದಂಬರ ಆಳ್ವಿಕೆಯು ಈ ಜಿಲ್ಲೆಯ ದಕ್ಷಿಣ ಭಾಗದ ಕಲಘಟಗಿ ತಾಲೂಕಿನ ಮುಕ್ಕಾಲು ಭಾಗ ವ್ಯಾಪಿಸಿತ್ತು. ಉಳಿದ ನಾಲ್ಕನೆ ಒಂದು ಭಾಗ ಕಲಘಟಗಿಯ ಆಗ್ನೇಯ ಭಾಗವು ಹಾನಗಲ್ಲು ಕದಂಬರ ಆಳ್ವಿಕೆಗೆ ಒಳಗೊಂಡಿದ್ದು ತಿಳಿದು ಬರುತ್ತದೆ.

## ಬಾದಾಮಿ ಚಾಲುಕ್ಯರು

ಬನವಾಸಿ ಕದಂಬರ ಅವನತಿಯ ನಂತರ ಕರ್ನಾಟಕವನ್ನು ಆಳಿದ ರಾಜಮನೆತನವೆಂದರೆ ಬಾದಾಮಿ ಚಾಲುಕ್ಯರು. ಇವರು ಬಾದಾಮಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಸುಮಾರು ೨೫೦ವರ್ಷಗಳ ಕಾಲದವರೆಗೆ ಕರ್ನಾಟಕವನ್ನು ಆಳಿದ ಬಲಿಷ್ಠ ರಾಜಮನೆತನ ಇದಾಗಿದೆ. ಪ್ರಸ್ತುತ ಇವರ ಕಾಲಘಟ್ಟಕ್ಕೆ ಸಂಬಂಧಿಸಿದ ಯಾವುದೇ ಕುರುಹುಗಳು ದೊರೆಯುವುದಿಲ್ಲ. ಆದರೆ ಧಾರವಾಡ ಜಿಲ್ಲೆಯ ನವಲಗುಂದ ತಾಲೂಕಿನ ಅಣ್ಣಿಗೇರಿಯ ಅಮೃತೇಶ್ವರ ದೇವಾಲಯದ ಆವರಣದಲ್ಲಿ ಇರುವ ಸಬ್ಬಿ-೩೦ರ (ಆಳ್ವಿಕೆ) ಶಾಸನವು ಇಮ್ಮಡಿ ಕೀರ್ತಿವರ್ಮನ ಕಾಲಕ್ಕೆ ಸೇರಿದ್ದು, ಇವನ ಆಳ್ವಿಕೆ ಕಾಲದಲ್ಲಿ ಕರಿಯಮ್ಮ ಜೇಬುಗಳಗೇರಿಯನ್ನು ಆಳುತ್ತಿದ್ದಾಗ ಚೇದಿಯ (ಜೀನ ಮಂದಿರ) ನಿರ್ಮಾಣ ಮಾಡಿದರ ಬಗ್ಗೆ ಶಾಸನ[೨೦] ದಾಖಲಿಸಿದ

**ರಾಷ್ಟ್ರಕೂಟರು** :

ಕ್ರಿ.ಶ. ೬ನೇ ಶತಮಾನದ ಮಧ್ಯಭಾಗದಿಂದ ೮ನೇ ಶತಮಾನದ ಮಧ್ಯಭಾಗದವರೆಗೆ ದಖ್ಖನಿನಲ್ಲಿ ಆಳ್ವಿಕೆ ಮಾಡಿದ ಬಾದಾಮಿ ಚಾಲುಕ್ಯರಿಗೆ ಸಂಬಂಧಿಸಿದಂತೆ ಯಾವುದೇ ದಾಖಲೆಗಳು ಈ ಜಿಲ್ಲೆಯಲ್ಲಿ ದೊರಕಿಲ್ಲ, ಬಾದಾಮಿ ಚಾಲುಕ್ಯರ ಉತ್ತರಾಧಿಕಾರಿಗಳಾಗಿ ರಾಷ್ಟ್ರಕೂಟರು ಕ್ರಿ.ಶ. ೭೫೩ ರಿಂದ ೯೭೩ರವರೆಗೆ ಕರ್ನಾಟಕದ ಅನೇಕ ಭಾಗಗಳಲ್ಲಿ ಆಡಳಿತ ನಡೆಸಿದರು. ಇವರು ತಮ್ಮ ಆಳ್ವಿಕೆಯ ಅವಧಿಯಲ್ಲಿ ಅನೇಕ ಕೆರೆಗಳನ್ನು ಕಟ್ಟಲು ಪ್ರೋತ್ಸಾಹವಿತ್ತರು. ವಿಜಾಪುರ ಜಿಲ್ಲೆಯ ಹುನಗುಂದ ತಾಲೂಕಿನ ಕೆಸರಭಾವಿ ಶಾಸನ ಕ್ರಿ. ಶ. ೮೩೭ರಲ್ಲಿ ಅಮೋಘ ವರ್ಷನಿಂದ ಅಥವಾ ಅವನ ಆಳ್ವಿಕೆಯಲ್ಲಿ ಒಂದು ಕೆರೆ ಮತ್ತು ಅದಕ್ಕೆ ತೂಬು ಕಟ್ಟಿಸಿದ್ದನ್ನು ದಾಖಲಿಸುತ್ತದೆ. ಅದೇ ರಾಜನ ಆಳ್ವಿಕೆಯಲ್ಲಿ ಕ್ರಿ.ಶ. ೮೯೨ರ ಬಾಗೇವಾಡಿ ತಾಲೂಕಿನ ದೇವರಹಿಪ್ಪರಗಿಯ ಶಾಸನ ಎರಡು ಕೆರೆಗಳು ಇದ್ದದ್ದನ್ನು ದಾಖಲಿಸಿದೆ. ಧಾರವಾಡ ಜಿಲ್ಲೆಯಲ್ಲಿ ರಾಷ್ಟ್ರಕೂಟರಿಗೆ ಸಂಬಂದಿಸಿದಂತೆ ಶಾಸನಗಳು ದೊರಕಿವೆ. ಬಾದಾಮಿ ಚಾಲುಕ್ಯರ ಮತ್ತು ಕಲ್ಯಾಣ ಚಾಲುಕ್ಯರಿಗೂ ಮಧ್ಯದಲ್ಲಿ ಸುಮಾರು ೨೨೫ ವರ್ಷಗಳಷ್ಟು ದೀರ್ಘ ಕಾಲ ರಾಷ್ಟ್ರಕೂಟರು ಇಡೀ ಕರ್ನಾಟಕದಲ್ಲಿ ಸಾರ್ವಭೌಮರಾಗಿ ಆಳ್ವಿಕೆ ನಡೆಸಿದರು. ಇವರನ್ನು ನೇರವಾಗಿ ಉಲ್ಲೇಖಿಸುವ ಹನ್ನೊಂದು ಶಾಸನಗಳು ಈ ಜಿಲ್ಲೆಯಲ್ಲಿ ಲಭ್ಯವಿವೆ. ಆದರೆ ಅವುಗಳಲ್ಲಿ ಈ ಮನೆತನದ ನಾಲ್ವರು ಅರಸರ ಉಲ್ಲೇಖಗಳನ್ನು ಕಾಣಬಹುದು. ಅಮೋಘವರ್ಷ ನೃಪತುಂಗ, ನಾಲ್ವಡಿ ಗೋವಿಂದ, ಮುಮ್ಮಡಿ ಗೋವಿಂದ, ಮುಮ್ಮಡಿ ಕೃಷ್ಣ ಮತ್ತು ಖೊಟ್ಟಿಗ ಪ್ರಸ್ತುತ ಕಲಘಟಗಿ ತಾಲೂಕಿನ ಕ್ರಿ.ಶ. ೯೩೭ರ ತಂಬೂರು ಶಾಸನ[೨೧] ಕಣ್ಣಹ ಮಹಾರಾಜರ ಹೆಸರುಗಳು ಕಂಡುಬರುತ್ತವೆ. ಪಲಸಿಗೆ-೧೨೦೦೦ ಆಳುತ್ತಿದ್ದ ಬಗ್ಗೆ ಉಲ್ಲೇಖವಿದೆ.

**ಕಲ್ಯಾಣ ಚಾಲುಕ್ಯರು**

ರಾಷ್ಟ್ರಕೂಟರ ಅವನತಿಯ ಕರ್ನಾಟಕದಲ್ಲಿ ಆಳ್ವಿಕೆ ಮಾಡಿದವರು ಕಲ್ಯಾಣ ಚಾಲುಕ್ಯ ಅರಸರು ಇವರು (ಕ್ರಿ.ಶ. ೯೭೩–ಕ್ರಿ.ಶ. ೧೧೮೯) ಆಳ್ವಿಕೆ ಮಾಡಿರುವುದು ಕಂಡುಬರುತ್ತದೆ. ಪ್ರಸ್ತುತ ಧಾರವಾಡ ಜಿಲ್ಲೆಯ ಇವರ ನೇರ ಆಳ್ವಿಕೆಗೆ ಒಳಪಟ್ಟಿರುವುದು ಕಂಡುಬರುತ್ತದೆ. ಕಲಘಟಗಿ ತಾಲೂಕಿನಲ್ಲಿ ಕಲ್ಯಾಣ ಚಾಲುಕ್ಯರ ಆಳ್ವಿಕೆಯನ್ನು ದೃಢಪಡಿಸುವ ೩೦ ಶಾಸನಗಳು ದೊರತಿವೆ. ಕಲ್ಯಾಣ ಚಾಲುಕ್ಯ ಪ್ರಮುಖ ಅರಸನಾದ ಆರನೇ ವಿಕ್ರಮಾದಿತ್ಯನ ಕ್ರಿ.ಶ. ೧೦೭೯ರ ಶಾಸನ[೨೨] ಮುಕ್ಕಲು ಗ್ರಾಮದಲ್ಲಿ ಕಂಡುಬಂದಿದೆ. ಈ ಶಾಸನದಲ್ಲಿ ಚಾಲುಕ್ಯ ಚಕ್ರವರ್ತಿ ತ್ರಿಭುವನಮಲ್ಲನ ಮಹಾಮಂಡಳೇಶ್ವರ ಆಗಿದ್ದನೆಂದು ಮತ್ತು ಇತನು ಕೊಂಕಣ–೯೦೦ನ್ನು ಮತ್ತು ಪಲಸಿಗೆ ಪನ್ನಿಚಾರ್ಸಿರವನ್ನು ಆಳುತ್ತಿದ್ದನೆಂದು ತಿಳಿಸುತ್ತದೆ. ಇವನ ಮತ್ತೊಂದು ಶಾಸನ ತೆರಸಿಕೊಪ್ಪದಲ್ಲಿ ದೊರೆತಿದೆ. ಕ್ರಿ.ಶ. ೧೦೮೦ರ ಈ ಶಾಸನ ಹುಲಿಗೊಂಡ ಮುದ್ದನಗೌಡ ಮತ್ತು ಪುಲ್ಲಗಾವುಂಡನು ಪೂರ್ವೋಕ್ತ ದಿನದಂದು ಹೂಲೇಶ್ವರ ದೇವರ ನೈವೇದ್ಯಕ್ಕೆಂದು ದತ್ತಿಯನ್ನು ದಾನಬಿಟ್ಟ ಉಲ್ಲೇಖವಿದೆ.

ಅಲ್ಲದೆ ಬೆಲವಂತರ ಗ್ರಾಮದಲ್ಲಿ ಎರಡನೆಯ ಜಗದೇಕ ಮಲ್ಲನ ಕ್ರಿ.ಶ. ೧೧೪೯ರ ಶಾಸನ, ಹಾಗೂ ಉಗ್ನಿಕೇರಿ ಗ್ರಾಮದಲ್ಲಿ ೨ನೇ ಸೋಮೇಶ್ವರನ ಕ್ರಿ.ಶ. ೧೧೭೧ರ ಶಾಸನ ಹಾಗೂ ತಂಬೂರು ಗ್ರಾಮದಲ್ಲಿ ೩ನೇ ತೈಲನ ಕ್ರಿ.ಶ. ೧೧೫೬ ಶಾಸನ, ಡಿಂಬವಳ್ಳಿ ಗ್ರಾಮದ ಕಂದಳಿ ದಾರಿಯ ಮೇಲೆ ಇರುವ ೪ನೇ ಸೋಮೇಶ್ವರನ ಕ್ರಿ.ಶ. ೧೧೭೪ರ ಶಾಸನಗಳು ದೊರೆತಿವೆ[೨೩]. ಕಂದಾಯ ದಾಖಲೆಗಳ ಅಧಿಕಾರಿ ಮಾಳಸಯ್ಯನು ತಂಬೂರ ಗ್ರಾಮದಲ್ಲಿ ಬೊಪ್ಪನು ಚೌಡೇಶ್ವರಿ ದೇವಾಲಯ ಸೋಮೇಶ್ವರನ ಕ್ರಿ.ಶ. ೧೧೭೪ರ ಶಾಸನಗಳು ಕಲಘಟಗಿ ತಾಲೂಕಿಲ್ಲಿ ಆಳ್ವಿಕೆ ನಡೆಸಿರುವುದನ್ನು ತಿಳಿಸುತ್ತದೆ. ಆರನೇ ವಿಕ್ರಮಾದಿತ್ಯನ ಕ್ರಿ.ಶ. ೧೧೦೨ರ ಮಲಕನಕೊಪ್ಪ ಶಾಸನದಲ್ಲಿ ಚಾಲುಕ್ಯ ಚಕ್ರವರ್ತಿ ೬ನೇ ವಿಕ್ರಮಾದಿತ್ಯನ ಸಾರ್ವಭೌಮಾದಿಪತ್ಯದಲ್ಲಿ ಗೋವೆಯ ಕದಂಬರ ವಂಶದ ಮಹಾಮಂಡಳೇಶ್ವರರಾದ ಗೋವಲದೇವನು ರಾಜ್ಯವಾಳುತ್ತಿದ್ದಾಗ ಪುಲಿಗೊಂಡ ಬೊಮ್ಮಶೇಟ್ಟಿಯು ಬಸದಿ ನಿರ್ಮಿಸಿದ ಹಾಗೂ ತಾನೇ ನಿರ್ಮಿಮಿಸಿದ ಬಸದಿಗೆ ಶಾಂತಿವರ್ಮದೇವನ ಪಾದವನ್ನು ತೊಳೆದು ಧಾರಾಪೂರ್ವಕವಾಗಿ ದತ್ತಿ ಬಿಟ್ಟ ಉಲ್ಲೇಖವಿದೆ. ತಂಬೂರ ಗ್ರಾಮದಲ್ಲಿ ಕ್ರಿ.ಶ. ೧೧೨೫ರ ಶಾಸನ[೨೪] ಜಯಕೇಶಿದೇವನು ಕೊಂಕಣ–೯೦೦ನ್ನು, ಪಲಸಿಗೆ ಪನ್ನಿಚ್ಚಾಸಿರವನ್ನು ಆಳುತ್ತಿರುವನು. ಆತನ ಪೀರಿಯಾಳು ಹಕಿಬಲ್ಲನ ಮಡದಿಯಾದ ಪದ್ಮಳಾದೇವಿಯು ಬನವಾಸಿ ಪನ್ನಿಚ್ಚಾಸಿರವನ್ನು ಆಳುತಿದ್ದಳು ಮಂತ್ರಿಯಾದ ಬರ್ಮಾಚಯ್ಯ ಮತ್ತು ರಾಚಮಲ್ಲ, ಹಕಿಬಲ್ಲ ಮತ್ತು ತನ್ನ ಮಂತ್ರಿಯರೊಡಗೂಡಿ ತಮ್ಮಿಯೂರಿನಲ್ಲಿ

ಜೀನದೇವಾಲಯವನ್ನು ನಿರ್ಮಿಸಿದ ನಂದಿ ದೇವರ ಪಾದಪ್ರಕ್ಷಾಯಿ ಮಾಡಿ ಭೂದಾನವನ್ನು ಮಾಡಿದ ಬಗ್ಗೆ ಉಲ್ಲೇಖವಿದೆ. ಆದೇರೀತಿ ತಾಲೂಕಿನ ಮಾವಳ್ಳಿ ಗ್ರಾಮದ ಕ್ರಿ.ಶ. ೧೧೨೫ರ ಶಾಸನವು ಅಪೂರ್ಣವಾಗಿದ್ದು, ಎರ್ಮಚ್ಚಯ್ಯನಾಯಕನಿಂದ ಶಾಂತಿ ಬಸದಿಗೆ ಭೂದಾನದ ಉಲ್ಲೇಖವಿದೆ[೨೫].

**ಹೊಯ್ಸಳರು**

ಕಲ್ಯಾಣ ಚಾಲುಕ್ಯರ ಮಾಂಡಳಿಕರಾಗಿ, ತದನಂತರ ಸ್ವತಂತ್ರ ರಾಜ್ಯವಾಳಿದ ಪ್ರಮುಖ ರಾಜಮನೆತನ ಇದಾಗಿದೆ. ಹೊಯ್ಸಳರ ಆಳ್ವಿಕೆಯು ವೀರಬಲ್ಲಾಳನಿಂದ ಪ್ರಾರಂಭವಾಗಿದೆ. ಪ್ರಸ್ತುತವಾಗಿ ಈ ತಾಲೂಕಿಗೆ ಸಂಬಂಭಪಟ್ಟ ಯಾವುದೇ ಶಾಸನಗಳು ಈ ತಾಲೂಕಿನಲ್ಲಿ ಕಂಡು ಬಂದಿಲ್ಲ. ಧಾರವಾಡ ಜಿಲ್ಲೆಯ ನವಲಗುಂದ ತಾಲೂಕಿನ ಅಣ್ಣಿಗೇರಿಯ ಅಮೃತೇಶ್ವರ ದೇವಾಲಯದಲ್ಲಿರುವ ಕ್ರಿ.ಶ. ೧೨ನೇ ಶತಮಾನದಲ್ಲಿ ಹೊಯ್ಸಳ ಅಧಿಕಾರಿಗಳು ಈ ದಾನದತ್ತಿಗಳನ್ನು ನೀಡಿದ್ದಾರೆ. ಕಾರಣ ಇಲ್ಲಿರುವ ದೇವಾಲಯವನ್ನು ಹೊಯ್ಸಳರು ನಿರ್ಮಿಸಿರುವುದು. ಹೊಯ್ಸಳ ಅಧಿಕಾರಿಗಳು ಅಮೃತೇಶ್ವರ ದೇವರಿಗೆ ಭೂಮಿದಾನ, ಸುವರ್ಣದಾನ, ಸುಂಕದಾನ ನೀಡಿದ ಉಲ್ಲೇಖಗಳಿವೆ[೨೬]. ಇವರು ಕ್ರಿ.ಶ. ೧೧ನೆಯ ಶತಮಾನದ ಕೊನೆಯಿಂದ ಸುಮಾರು ೧೪ನೇ ಶತಮಾನದ ಮಧ್ಯದವರೆಗೂ ದಕ್ಷಿಣ ಕರ್ನಾಟಕದಲ್ಲಿ ಆಳ್ವಿಕೆ ಮಾಡಿದರು. ಆದರೆ ಕ್ರಿ.ಶ ೧೧ ನೇ ಶತಮಾನದ ಕೊನೆಯಲ್ಲಿ ಅವರ ಆಳ್ವಿಕೆ ಉತ್ತುಂಗಕ್ಕೆರಿತು ಅವರು ಇಡೀ ಕರ್ನಾಟಕವನ್ನು ಆಳಿದರು. ಪ್ರಾಚೀನ ಕರ್ನಾಟಕದ ಪ್ರಮುಖ ಕೆರೆಗಳ ನಿರ್ಮಾಪಕರೆಂದರೆ ಹೊಯ್ಸಳರು.

**ಕಲಚೂರ್ಯರು**

ಕಲ್ಯಾಣ ಚಾಲುಕ್ಯರ ಸಾಮಂತರಾಗಿ ಕರ್ನಾಟಕದಲ್ಲಿ ಆಳ್ವಿಕೆ ನಡೆಸಿದ ಕೀರ್ತಿ ಕಲಚೂರ್ಯರಿಗೆ ಸಲ್ಲುತ್ತದೆ. ಇವರು ಕರ್ನಾಟಕದ ವಿವಿಧ ಪ್ರದೇಶಗಳಲ್ಲಿ ಆಳ್ವಿಕೆ ಮಾಡಿದರು ಎಂಬುದಕ್ಕೆ ಕೆಲವು ಶಾಸನಾಧಾರಗಳು ಇವೆ. ಅದೇರೀತಿ ಕಲಘಟಗಿ ತಾಲೂಕಿನಲ್ಲಯೂ ಸಹ ಇವರು ಆಳ್ವಿಕೆ ಮಾಡಿದ ಬಗ್ಗೆ ಕೆಲವು ಆಧಾರಗಳು ದೊರೆತಿವೆ. ಕಲಚೂರಿ ಅರಸರಲ್ಲಿ ಬಿಜ್ಜಳನು ಒಬ್ಬ. ಕ್ರಿ.ಶ. ೧೧೬೮ರ ತಂಬೂರು ಶಾಸನದಲ್ಲಿ ಮಹಾಮಂಡಳೇಶ್ವರರಾದ ವೀರಮಲ್ಲಿಕಾರ್ಜುನದೇವನು ತನ್ನ ರಾಜಧಾನಿಗೆ ಬಂದು ಪೂರ್ವದಲ್ಲಿ ಬಿಡುಬಿಟ್ಟ ಹಾನಗಲ್ಲು ಕೋಟೆಗೆ ತನ್ನ ಆನೆಯನ್ನು ಆಕ್ರಮಣ ಮಾಡಿದಾಗ ಸಾಮಂತ ಮೈದುನ ಮಲ್ಲರಸನು ಹೋರಾಡಿ ಆನೆಯನ್ನು ಕೊಂದು ವೀರನಮರಣ ಹೊಂದಿದ ವಿಷಯವಿದೆ. ಈ ಗ್ರಾಮದಲ್ಲಿ ಮುಮ್ಮಡಿ

ಸೋಮೇಶ್ವರನ ಕಾಲಕ್ಕೆ ಸಂಬಂಧಿಸಿದಂತೆ ಮತ್ತೆ ಎರಡು ವೀರಗಲ್ಲು ಶಾಸನಗಳಿವೆ. ಕ್ರಿ.ಶ. ೧೧೪೬ ರಲ್ಲಿ ತಂಬೂರು ಗ್ರಾಮದಲ್ಲಿ ಬೋಪ್ಪನ ಚೌಡೇಶ್ವರ ದೇವಾಲಯವನ್ನು ನಿರ್ಮಿಸಿ ಅವರ ಸೇವೆಗೆ ದತ್ತಿ ನೀಡಿದ್ದಾನೆ. ಜಗದೇಕ ಮಲ್ಲನ ಕಾಲದಲ್ಲಿ ಅಂದರೆ ಕ್ರಿ.ಶ.೧೧೫೬ ರಲ್ಲಿ ನಾರಾಯಣ ದೇವರಿಗೆ ದತ್ತಿ ನೀಡಲಾಗಿದೆ[೨೭].

**ವಿಜಯನಗರದ ಅರಸರು**

ಹೊಯ್ಸಳರ ಮಾಂಡಲಿಕರಾದ ನಂತರ ಸ್ವತಂತ್ರ ರಾಜರಾಗಿ ರಾಜ್ಯಭಾರವನ್ನು ಮಾಡಿದರು. ಈ ಸಾಮ್ರಾಜ್ಯವನ್ನು ಸಂಗಮನ ಮಕ್ಕಳಾದ ಹರಿಹರ ಮತ್ತು ಬುಕ್ಕರು ಸ್ಥಾಪಿಸಿದರು. ಈ ಒಂದು ಅರಸು ಮನೆತನದಲ್ಲಿ ನಾಲ್ಕು ಮನೆತನಗಳು ಆಳ್ವಿಕೆಯನ್ನು ಮಾಡಿದವು. ಅವುಗಳೆಂದರೆ ಸಂಗಮ, ಸಾಳುವ, ತುಳು ಮತ್ತು ಅರವೀಡು ಈ ಸಂಗಮ ವಂಶದ ಪ್ರೌಢದೇವರಾಯನೇ ಪ್ರಸಿದ್ಧ ಅರಸನಾಗಿದ್ದನು. ಪ್ರಸ್ತುತ ಅಧ್ಯಯನದಲ್ಲಿ ಈ ಕಾಲದ ಯಾವುದೇ ಮಾಹಿತಿಗಳು ದೊರೆಯುವುದಿಲ್ಲ. ಧಾರವಾಡ ಜಿಲ್ಲೆಯ ನವಲಗುಂದ ತಾಲೂಕಿನ ಗುಡಿಸಾಗರ ಎಂಬ ಸ್ಥಳದಲ್ಲಿ ಸದಾಶಿವರಾಯನು ನಾವಿದ ನಾಗೋಜನಿಗೆ ಮಾನ್ಯದ ದಾನ ನೀಡಿದನೆಂದು ಆ ಊರಿನ ಶಾಸನದಲ್ಲಿ ಉಲ್ಲಖವಿದೆ[೨೮]. ಅದೇ ತಾಲೂಕಿನ ಬೆಳವಟಿಗೆ ಗ್ರಾಮದಲ್ಲಿರುವ ಕ್ರಿ.ಶ. ೧೦೯೩ ರ ೬ನೇ ವಿಕ್ರಮಾದಿತ್ಯನ ಶಾಸನವು, ಬೈರುಂಬರ ಮಲ್ಲಯ್ಯನು ಬೆಳ್ಳವಟಿಗೆಲ್ಲಿ ಬೈರುಂಬೇಶ್ವರ ಮಲ್ಲಿಮಯ್ಯನು ಬೆಳ್ಳವಟಿಗೆಯಲ್ಲಿ ಬೈರುಂಬೇಶ್ವರ ದೇವಾಲಯವನ್ನು ಕಟ್ಟಿಸಿ ಭೂದಾನ ಮಾಡಿದನೆಂದಿದೆ. ಇದರ ಮೇಲಿನ ರಾಮಲಿಂಗೇಶ್ವರ ಗುಡಿಯ ಪ್ರಾಚೀನ ಹೆಸರು ಬೈರುಂಬೇಶ್ವರ ಎಂದು ತಿಳಿದು ಬಂದಿರುವುದು. ಮೂಲಹೆಸರು ಬೆಳ್ಳವಟ್ಟಿಗೆ ಎಂದಿದೆ. ಉಳಿದೆರಡು ಶಾಸನಗಳು ವಿಜಯನಗರ ಕಾಲಕ್ಕೆ ಸೇರಿದ್ದು, ನಾವಿದರಿಗೆ ನೀಡಿದ ಸುಂಕವಿನಾಯತಿ ಮತ್ತು ಕೆರೆಯನ್ನು ಅಗೆದವರಿಗೆ ನೀಡಿದ ದಾನವನ್ನು ಕುರಿತಿವೆ. ಮೂರು ಶತಮಾನಕ್ಕಿಂತ ಅಧಿಕ ಕಾಲ ಆಳಿದ ವಿಜಯನಗರ ಅರಸರು ನೀರಾವರಿಗೆ ಕೊಟ್ಟ ಪ್ರಾಶಸ್ತ್ಯವು ದೇಶ–ವಿದೇಶದ ಪ್ರವಾಸಿಗರ ಮೆಚ್ಚುಗೆ ಗಳಿಸಿತು. ಕರ್ನಾಟಕದಲ್ಲಿ ವ್ಯವಸಾಯಕ್ಕೆ ಕೆರೆ ಕಟ್ಟೆಗಳನ್ನು ಕಟ್ಟಿಸುವ ಪಾಠ ಕದಂಬರು, ಗಂಗರು, ರಾಷ್ಟ್ರಕೂಟರು, ಚಾಲುಕ್ಯರು, ಮತ್ತು ಹೊಯ್ಸಳರ ಕಾಲದಿಂದಲೂ ನಡೆದು ಬಂದಿತ್ತು. ಆದರೆ ವಿಜಯನಗರ ಅರಸರ ಕಾಲದಲ್ಲಿ ಒಬ್ಬವ್ಯಕ್ತಿ, ನೀರಾವರಿ ಕಾರ್ಯ ಮಾಡುವುದು ಏಳು ಶ್ರೇಯಸ್ಕರ ಕಾರ್ಯಗಳಲ್ಲಿ ಒಂದಾಗಿತ್ತು. ಕೆರೆಯ ರಚನೆಯ ತಾಂತ್ರಿಕತೆ ಕೂಡ ಆ ಕಾಲದಲ್ಲಿ ಅಭಿವೃದ್ಧಿ ಹೊಂದಿತ್ತು. ವಿಜಯನಗರ ಅರಸರ ಕಾಲದಲ್ಲಿ ಕೆರೆ ಕಟ್ಟುವುದು ಒಂದು ಸಂಸ್ಕೃತಿಯಾಗಿ ಬೆಳೆಯಿತು.

## ಅಡಿ ಟಿಪ್ಪಣಿಗಳು

೧. ಸೂರ್ಯನಾಥ. ಯು. ಕಾಮತ್., ಕರ್ನಾಟಕ ರಾಜ್ಯ ಗ್ಯಾಜೆಟಿಯರ್ ಧಾರವಾಡಜಿಲ್ಲೆ ಪುಟ-೦೬

೨. ಅದೇ ಪುಟ-೦೭

೩. ಮಾಹಿತಿ ನೀಡಿದವರು ಮಹೇಂದ್ರ ಪಾಟೀಲ್

೪. ಸೂರ್ಯನಾಥ. ಯು. ಕಾಮತ್., ಕರ್ನಾಟಕ ರಾಜ್ಯ ಗ್ಯಾಜೆಟಿಯರ್ ಧಾರವಾಡಜಿಲ್ಲೆ ಪುಟ-೯೬೦

೫. ಅದೇ ಪುಟ-೯೬೧,

೬. S I I VOL NO- XVII Page No -೧೫೬

೭. ಸೂರ್ಯನಾಥ. ಯು. ಕಾಮತ್., ಪುರ್ವೋಕ್ತ, ಪುಟ-೫

೮. ಕಲಘಟಗಿ ಕಲೆ ಕೀರು ಪ್ರಬಂಧ, ಪುಟ-೧೨

೯. ಸುರೇಶ ಹಾನಗಲ್ಲು., 'ಧಾರವಾಡ ಜಿಲ್ಲೆಯ ಶಾಸನಗಳು ಮತ್ತು ದೇವಾಲಯಗಳು', ಪುಟ-೪೫

೧೦. ಅದೇ ಪುಟ- ೪೬

೧೧. ಬಿ ಜಯಮ್ಮ 'ಧಾರವಾಡ ಜಿಲ್ಲೆಯ ಪುರಾತತ್ವ', ಪುಟ-೨೮

೧೨. ಅದೇ ಪುಟ-೨೯

೧೩. ಸಿ. ಮಹದೇವ 'ಕರ್ನಾಟಕ ದೇವಾಲಯ ಕೋಶ ; ಧಾರವಾಡ ಜಿಲ್ಲೆ', ಪುಟ-೩೩

೧೪. ಅದೇ ಪುಟ-೩೪

೧೫. ಜಯಮ್ಮ.ಬಿ., ಧಾರವಾಡ ಜಿಲ್ಲೆಯ ಪುರಾತತ್ವ, ಪುಟ-೩೨

೧೬. ಅದೇ ಪುಟ-೩೩

೧೭. ಸಿ. ಮಹದೇವ ಪೂರ್ವೋಕ್ತ ಪುಟ-೨೯

೧೮. ಕಲಬುರ್ಗಿ ಎಂ.ಎಂ ಧಾರವಾಡ ಜಿಲ್ಲೆಯ ಶಾಸನ ಸೂಚಿ ಪುಟ-೨೬

೧೯. ಜಯಮ್ಮ.ಬಿ., ಪೂರ್ವೋಕ್ತ ಪುಟ-೩೧

೨೦. ಸಿ. ಮಹದೇವ 'ಕರ್ನಾಟಕ ದೇವಾಲಯ ಕೋಶ ; ಧಾರವಾಡ ಜಿಲ್ಲೆ', ಪುಟ-೧೨೩

೨೧. ಜಯಮ್ಮ.ಬಿ., ಧಾರವಾಡ ಜಿಲ್ಲೆಯ ಪುರಾತತ್ವ, ಪುಟ-೩೩

೨೨. ಕಲಬುರ್ಗಿ ಎಂ.ಎಂ ಧಾರವಾಡ ಜಿಲ್ಲೆಯ ಶಾಸನ ಸೂಚಿ ಪುಟ-೨೮

೨೩. ಜಯಮ್ಮ.ಬಿ., ಪೂರ್ವೋಕ್ತ ಪುಟ-೩೨

೨೪. ಶಾಂತಾಕುಮಾರಿ 'ಇತಿಹಾಸ ದರ್ಶನ' ತಂಬೂರು ಶಾಸನ ಪುಟ-೭

೨೫. ಜಯಮ್ಮ.ಬಿ., ಧಾರವಾಡ ಜಿಲ್ಲೆಯ ಪುರಾತತ್ವ, ಪುಟ-೩೭

೨೬. ಸಿ. ಮಹದೇವ 'ಕರ್ನಾಟಕ ದೇವಾಲಯ ಕೋಶ ; ಧಾರವಾಡ ಜಿಲ್ಲೆ', ಪುಟ-೧೨೬

೨೭. ಶಾಂತಾಕುಮಾರಿ 'ಇತಿಹಾಸ ದರ್ಶನ' ತಂಬೂರು ಶಾಸನ ಪುಟ-೯

೨೮. ಸಿ.ಮಹದೇವ 'ಕರ್ನಾಟಕ ದೇವಾಲಯ ಕೋಶ ; ಧಾರವಾಡ ಜಿಲ್ಲೆ', ಪುಟ-೧೩೩

# ಅಧ್ಯಾಯ-ಮೂರು

## ಕೆರೆಗಳ ಉಗಮ ಮತ್ತು ಪ್ರಾಚೀನತೆ

**ಉಗಮ :**

ಕ್ರಿ.ಶ. ಆರಂಭದ ಶತಮಾನಗಳಲ್ಲಿ ಕರ್ನಾಟಕವು ಅತೀ ಪ್ರಾಚೀನ ನೀರಾವರಿ ಯೋಜನೆಯನ್ನು ಅಳವಡಿಸಿಕೊಂಡಿತ್ತೆಂಬುದು ಶಿಲಾ ಶಾಸನಗಳಿಂದ ತಿಳಿಯುತ್ತದೆ. ಚಂದ್ರವಳ್ಳಿ, ತಾಳಗುಂದ ಮತ್ತು ಗುಡ್ನಾಪುರ ಕೆರೆಗಳು ಕದಂಬರ ಕಾಲದ ಕೆರೆಗಳಾಗಿವೆ. ಪ್ರಾಚೀನ ಕಾಲದಲ್ಲಿ ಬಾವಿಗಳನ್ನು ತೋಡಿಸುವುದು, ಕೆರೆಗಳನ್ನು ಕಟ್ಟಿಸುವುದು ಒಂದು ಪುಣ್ಯದ ಕಾರ್ಯವೆಂದು ಪರಿಗಣಿಸಲಾಗಿತ್ತು. ರಾಜರು, ರಾಣಿಯರು, ಮಂತ್ರಿ ಮಹೋದರರು, ದಂಡನಾಯಕರು, ಅಧಿಕಾರಿಗಳು, ಗಣ್ಯರು, ವರ್ತಕರು, ದೇವಸ್ಥಾನ ಕಟ್ಟಲು ತೋರಿಸಿದ ಭಕ್ತಿ ಭಾವದಿಂದಲೇ ಕೆರೆ ಮತ್ತು ಜಲಾನಯನಗಳನ್ನು ಕಟ್ಟುತ್ತಿದ್ದರು. ಹಂಪಿಯ ಲಕ್ಷ್ಮೀಧರನ ಶಿಲಾಶಾಸನ ಒಂದರಲ್ಲಿ, ತಾಯಿ ತನ್ನ ಮಗುವಿಗೆ ಹಾಲೆರಿಯುವಾಗ "ಕೆರೆಯಂ ಕಟ್ಟಿಸು ಬಾವಿಯಂ ಸವೆಸು ದೇವಗಾರಂಗಳಿಂ ಮಾಟಿಸು", ಎಂದು ಹಾಡುತ್ತಿದ್ದಳೆಂದು ಹೇಳಿದೆ[1]. ಕ್ರಿ.ಶ. ೧೧೪೮ ರ ಶಾಸನದ ಪ್ರಕಾರ ಶಿರಸಂಗಿಯ ಸಾಮಾನ್ಯ ಸ್ತ್ರೀಯಾದ ಸೋರಿಗಾವುಂಡಿಯು ತನಗೆ ಪುಣ್ಯವನ್ನು ತರುವಂತಹ ಯಾವುದಾದರೂ ಕೆಲಸವನ್ನು ಮಾಡಬೇಕೆಂದು ತನ್ನ ಮೂರು ಮಕ್ಕಳನ್ನು ಕೋರಿಕೊಂಡಳೆಂದು ಅದರಂತೆ ಒಂದು ಕೆರೆಯನ್ನು ದುರಸ್ತಿ ಮಾಡಿದರೆಂದು ಹೇಳಲಾಗಿದೆ.

ಮಾನವನ ಉಗಮ ಮತ್ತು ವಿಕಾಸದ ಸುದೀರ್ಘ ಇತಿಹಾಸವನ್ನು ಗಮನಿಸಿದಾಗ ಮಾನವ ಪೂರ್ವ ಕಾಲದಿಂದಲೂ ಭೌತಿಕ ಹಾಗೂ ಮಾನಸಿಕವಾಗಿ ವಿಕಾಸ ಹೊಂದುವದರೊಂದಿಗೆ ಪರಿಸರದಲ್ಲಿ ಆಗುತ್ತಿರುವ ಕಠಿಣ ಸಮಸ್ಯೆಗಳನ್ನು ಸಹ ಎದುರಿಸುತ್ತಾ ಬಂದಿದ್ದಾರೆ. ಮಾನವ ಎಲ್ಲಾ ಬಗೆಯ ಚಟುವಟಿಕೆಗಳ ಕಾರ್ಯಕ್ಷೇತ್ರವು ಸರೋವರ, ಕೆರೆ, ನದಿ, ತೊರೆಗಳ ಸಮೀಪದಲ್ಲಿಯೇ ಕೇಂದ್ರಿಕೃತವಾಗಿತ್ತು. ಸರಿಸುಮಾರು ಇಂದಿನಿಂದ ಏಳು ಸಾವಿರ ವರ್ಷಗಳ ಪೂರ್ವದಲ್ಲಿ ಮಾನವನು ತನ್ನ ಅಲೇಮಾರಿ ಜೀವನ ಬಿಟ್ಟು ಒಂದೆಡೆ ಸ್ಥಿರವಾಗಿ ನೆಲೆ ನಿಲ್ಲುವ ಪ್ರಯತ್ನವು ಅವನ ಜೀವನದಲ್ಲಿ ಬಂದದ್ದು ವ್ಯವಸಾಯದಿಂದಲೇ. ಈ ವ್ಯವಸಾಯ ಪದ್ಧತಿಯು ಅವರ ಜೀವನದಲ್ಲಿ ಒಂದು ಕ್ರಮಬದ್ಧತೆಯನ್ನು ತಂದಿತು. ಮಾನವ ಸರ್ವೋತೋಮುಖ ಅಭಿವೃದ್ಧಿ ವ್ಯವಸಾಯದ ಆವಿಷ್ಕಾರದಿಂದಲೇ ಪ್ರಾರಂಭವಾಯಿತು. ಒಂದು ಸಂಸ್ಕೃತಿಯ ಉಗಮ ಮತ್ತು ವಿಕಾಸಕ್ಕೆ ವ್ಯವಸಾಯ ತಳಹದಿಯಾಯಿತು[2].

ಮಾನವನು ಮೊದಲಿಗೆ ವ್ಯವಸಾಯವನ್ನು ಪ್ರಾರಂಭಿಸಿದಾಗ ಮಳೆಯನ್ನು ನಂಬಿ, ವಿಪುಲವಾಗಿ ನೀರು ಸಿಗುವ ಭಾಗವಾಗಿದ್ದ ನದಿಯನ್ನು ಆಶ್ರಯಿಸಿದ್ದನು. ಪರಿಸರದಲ್ಲಿ ಆಗುತ್ತಿದ್ದ ಬದಲಾವಣೆ ಮತ್ತು ಸಕಾಲದ ವೈಪಲ್ಯತೆಯು ಅವನನ್ನು ಆಗಾಗ ಕಷ್ಟಕ್ಕೆ ಒಳಪಡಿಸುತ್ತಿದ್ದರಿಂದ ಅವನು ನೀರನ್ನು ಸಂಗ್ರಹಮಾಡಿ ಉಪಯೋಗ ಮಾಡಹತ್ತಿದ. ಮುಂದೆ ವ್ಯವಸಾಯಕ್ಕೆ ಉಪಯೋಗಿಸಲು ನೀರಿಗೆ ಒಡ್ಡು ಹಾಕಿ ಸಂಗ್ರಹ ಮಾಡಲು ಪ್ರಾರಂಭಿಸಿದ ನಂತರ ಇವುಗಳೇ ಕೆರೆಕುಂಟೆಗಳಾಗಿ ಉಗಮಗೊಂಡವು.[೩]

**ಪ್ರಾಚೀನತೆ :**

ನೀರು ಮಾನವನ ಮೂಲಭೂತ ಅವಶ್ಯಕತೆಗಳಲ್ಲಿ ಒಂದು. ನೀರಿಲ್ಲದೆ ಮನುಷ್ಯ ಅಷ್ಟೆ ಏಕೆ, ಇಡೀ ಜೀವ ಸಂಕುಲ ಬದುಕಲಾರದು. ಹಾಗಾಗಿ ನೀರು ಭೂಮಿಯ ಮೇಲೆ ಅತ್ಯಮೂಲ್ಯ ಸಂಪನ್ಮೂಲ. ನೀರು ಕೇವಲ ಮನುಷ್ಯ, ಪ್ರಾಣಿ ಹಾಗೂ ಪಕ್ಷಿ ಸಂಕುಲಕ್ಕೆ ಮಾತ್ರವಲ್ಲ ಸಸ್ಯ ಸಂಕುಲಕ್ಕೂ ಜೀವ ಸಂಜೀವಿನಿ. ಹಾಗಾಗಿ ಮನುಷ್ಯ ಭೂಮಿ ಮೇಲೆ ಕಾಣಿಸಿಕೊಂಡಾಗಿನಿಂದ ಸದಾ ನೀರಿನ ನೀರಿನ ಮೂಲ ನೆಲೆಗಳಲ್ಲಿ ವಾಸಿಸಲಾರಂಭಿಸಿದ. ಕ್ರಮೇಣ ನಾಗರಿಕತೆ ವಿಕಸಿಸಿದಂತೆ ಆದಿ ಮಾನವ ಬೇಟೆ ಸಂಸ್ಕೃತಿಗೆ ಕಾಲಿಸಿದಾಗ ಅವನಿಗೆ ನೀರಿನ ಅವಶ್ಯಕತೆ ಮತ್ತು ಮಹತ್ವ ಮತ್ತಷ್ಟು ಹೆಚ್ಚಾಯಿತು. ಮಳೆಗಾಲದಲ್ಲಿ ತನ್ನ ಸುತ್ತಮುತ್ತಲು ಪ್ರಕೃತಿ ಹಚ್ಚ ಹಸುರಿನಿಂದ ನಳನಳಸುವುದನ್ನು ಕಂಡುಕೊಂಡ.[೪] ತಾನು ಬಿತ್ತಿದ ಬೆಳೆ ಬೆಳೆಯಲು ಈಗ ಅವನು ಬೆಟ್ಟದಿಂದ ಇಳಿದು ಬಯಲು ಪ್ರದೇಶಕ್ಕೆ ಬರುವುದು ಅನಿವಾರ್ಯವಾಯಿತು. ಅಲ್ಲಿ ಸುರಿಯುತ್ತಿದ್ದ ಮಳೆ ನೀರನ್ನು ಹಿಡಿದಿಟ್ಟುಕೊಳ್ಳಲು ಯೋಚಿಸಿದ. ಹರಿದ ಹಳ್ಳಗಳಿಗೆ ಒಡ್ಡುಗಳನ್ನು ಹಾಕಿ, ಇಲ್ಲವೇ ಗುಂಡಿಗಳನ್ನು ತೋಡಿ ನೀರನ್ನು ನಿಲ್ಲಿಸಿದ. ಹೀಗೆ ಸಂಗ್ರಹಿಸಿದ ನೀರು ಅವನ ದಿನ ಬಳಕೆಯ ಜೊತೆಗೆ ಕೃಷಿಗೂ ಉಪಯೋಗವಾಗಿ ನೀರಾವರಿ ಪದ್ಧತಿ ಮೊದಲಾಯಿತು. ರಾಜಸತ್ತೆ ಪ್ರಾರಂಭಗೊಂಡ ಮೇಲೆ ಜನರಿಗೆ, ಪ್ರಾಣಿಗಳಿಗೆ ಮತ್ತು ಕೃಷಿಗೆ ನೀರಿನ ವ್ಯವಸ್ಥೆಯನ್ನು ಒದಗಿಸುವುದು ಅರಸರ ಒಂದು ಸಾಮಾಜಿಕ ಜವಾಬ್ದಾರಿಯಾಯಿತು. ಕೆರೆ, ಬಾವಿ, ಕೊಳ, ಕಟ್ಟೆ, ಕಾಲುವೆ ಮುಂತಾದ ರೂಪಗಳಲ್ಲಿ ಜಲ ಸಂಗ್ರಹಣೆ ವಿಧಾನಗಳು ರೂಢಿಗೊಂಡವು. ಹೀಗೆ ಕಲಘಟಗಿ ತಾಲೂಕಿನಲ್ಲಿ ಪ್ರಾರಂಭಿಕ ಅರಸರ ಕಾಲಗಳಲ್ಲಿ ಇಂತ ಪ್ರಯಯ್ನಗಳು ನಡೆದಿರುವುದಕ್ಕೆ ಕೆಲವು ಸಾಕ್ಷಿಗಳಿವೆ. ಊರನ್ನು ಕಟ್ಟುವ ಮೊದಲು ಕೆರೆಗಳನ್ನು ಕಟ್ಟು ಊರು ತನ್ನಿಂದ ತಾನೇ ಬೆಳೆಯುತ್ತದೆ ಎಂಬುದು ವಾಸ್ತವ. ಕೆರೆಗಳನ್ನು ಅಲ್ಲಿ ಊರು ಬೆಳೆಯುತ್ತದೆ. ಊರು ಬೆಳೆಯಲು ಕೆರೆಗಳು ಬೇಕೆಬೇಕೆ. ಹಾಗೆ ನೋಡಿದರೆ ನಮ್ಮ ನಾಗರೀಕತೆ ಬೆಳೆಯುದಿರುವುದೇ ನದಿ ಪಾತ್ರಗಳಲ್ಲಿ ಹಾಗೂ ಕೆರೆ-ಕಟ್ಟೆಗಳಲ್ಲಿ. ಕೆರೆ ಕೇವಲ ನೀರಿನ ಸೆಲೆ ಅಥವಾ ಸಂಗ್ರಹತಾಣ ಮಾತ್ರ ಅಲ್ಲ.

ಕೆರೆಗಳಿಂದ ನಿರ್ಧರಿಸುವ ಕಾಲವು ಇತ್ತು. ಯಾವ ಊರಿನಲ್ಲಿ ಹೆಚ್ಚು ಕೆರೆಗಳಿವೆಯೋ ಆ ಊರು ಸಮೃದ್ಧವಾಗಿದೆ ಎಂಬುವುದು ನಂಬಿಕೆ. ಕೆರೆಗಳು ನಮ್ಮ ಜೀವನದ ಅವಿಭಾಜ್ಯ ಅಂಗ. ನಮ್ಮ ಜನಪದರಲ್ಲಂತೂ ಕೆರೆಗಳ ಪಾತ್ರಗಳೂ ಕೆರೆಗಳ ಸುತ್ತಲೇ ಸುತ್ತುತ್ತಿರುತ್ತವೆ[೩]. ಯಾವುದೇ ಊರಿರಬಹುದು, ಆ ಊರಿನಲ್ಲಿ ಒಂದು ಕೆರೆಯಿರಬೇಕು, ನೀರನ್ನು ಸೇದಲು, ಬಟ್ಟೆ ತೊಳೆಯಲು, ಸ್ನಾನಮಾಡಲು, ಜಾನುವಾರುಗಳಿಗೆ ಮೈ ತೊಳೆಯಲು ಎಲ್ಲರು ಕೆರೆಗೆ ಬರಬೇಕು ಅಲ್ಲಿಗೆ ಬರುವವರನ್ನು ನೋಡಲು, ಕಳ್ಳದೃಷ್ಟಿ ಬೀರಲು, ನಿಂತು ಮಾತನಾಡಲು ಕೆರೆಯೇ ಒಂದು ಕುಂಟ ನೆಪ. ಊರಿಗೆ ಬಂದವಳು ನೀರಿಗೆ ಬಾರದಿರುತ್ತಾಳಾ[೪] ..ಎಂದು ಹೇಳಿರುವುದು ಕೆರೆಯನ್ನು ಉದ್ದೇಶಿಸಿಯೇ.

ಕೆರೆ ಕಟ್ಟೆಗಳು ಭಾರತೀಯ ಪರಂಪರೆಯಲ್ಲಿ ಮಾನವನ ಅವಿಭಾಜ್ಯ ಅಂಗಗಳಾಗಿ ಪ್ರಾಚೀನ ಕಾಲದಿಂದಲೂ ನಡೆದುಕೊಂಡು ಬಂದಿವೆ. ಆದಿ ಮಾನವನು ತನ್ನ ನೀರಿನ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಮಳೆಯ ನೀರನ್ನು ಸಂಗ್ರಹಿಸುವ, ನದಿಯ ಪ್ರವಾಹವನ್ನು ಬೇರೆಡೆಗೆ ತಿರುಗಿಸುವ ಪ್ರಯತ್ನಗಳನ್ನು ಮಾಡಿ, ಅದರಿಂದ ಬೇಸಾಯವನ್ನು ಮಾಡುವುದಲ್ಲದೇ, ತನ್ನ ವಸತಿಯ ಬೆಳವಣಿಗೆಗೆ ಕಾರಣನಾಗಿದ್ದಾನೆ.

ಕರ್ನಾಟಕದ ಮಟ್ಟಿಗೆ ಹೇಳುವುದಾದರೆ, ನೂತನ ಶಿಲಾಯುಗದ ಕಾಲದಲ್ಲಿ ಹಾಗೂ ನಂತರದ ಬೃಹತ್ ಶಿಲಾಯುಗದ ಕಾಲದಲ್ಲಿ ಕೃತಕ ಅಥವಾ ಮಾನವ ನಿರ್ಮಿತ ಕೆರೆಗಳು ಪ್ರಾರಂಭವಾದವೆಂದು ಹೇಳಬಹುದು. ಇದನ್ನು ಬೇರೆ ರೀತಿಯಾಗಿ ಹೇಳುವುದಾದರೆ ಕೆರೆ ಕಟ್ಟೆಗಳ ನಿರ್ಮಾಣ ಕಾರ್ಯ ಕರ್ನಾಟಕದಲ್ಲಿ ಪ್ರಾರಂಭವಾದದ್ದು, ನೂತನ ಶಿಲಾಯುಗದ ಕಾಲದಲ್ಲಿ ಅದು ಹೆಚ್ಚು ಬೆಳಕಿಗೆ ಬಂದಿರುವುದು ಬೃಹತ್ ಶಿಲಾಯುಗದ ಕಾಲದಲ್ಲಿ ಶಾತವಾಹನ ರಾಜನಾದ ಪುಳಮಾಯಿಯ ಮ್ಯಾಕೆಡೋಣಿ ಶಾಸನವು ಕೆರೆ ಬಗ್ಗೆ ಪ್ರಸ್ತಾಪಿಸುವ ಅತೀ ಪ್ರಾಚೀನವಾದ ಶಾಸನ. ಇದಾದ ನಂತರ ಕದಂಬ ಅರಸ ಮಯೂರವರ್ಮನ ಚಂದ್ರವಳ್ಳಿ ಶಾಸನ[೫] ಚಂದ್ರವಳ್ಳಿಯಲ್ಲಿ ಕೆರೆಯೊಂದನ್ನು ಕಟ್ಟಿಸಿದ್ದನ್ನು ಉಲ್ಲೇಖಿಸಿದೆ. ಕರ್ನಾಟಕ ಪ್ರದೇಶವನ್ನು ಆಳಿದ ಶಾತವಾಹನರು ಕದಂಬರು, ಗಂಗರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ವಿಜಯ ನಗರದ ಅರಸರು, ಆದಿಲ್‌ಶಾಹಿಗಳು ಮತ್ತು ಬ್ರಿಟಿಷರು ಕೆರೆಗಳನ್ನು ಹತ್ತ ಹಲವು ಕಾರಣಗಳಿಗೆ ನಿರ್ಮಿಸಿದರೂ ವ್ಯವಸಾಯ ಮತ್ತು ವಸತಿ ಪ್ರದೇಶಕ್ಕೆ ನೀರನ್ನು ಒದಗಿಸುವ ಮುಖ್ಯ ಉದ್ದೇಶವನ್ನು ಹೊಂದಿದ್ದರು. ಕೆರೆಗಳ ನಿರ್ಮಾಣ ಪುಣ್ಯಪ್ರದವೆಂದೇ ಭಾವಿಸಿದ್ದ ಅಂದಿನ ಜನ ಅದನ್ನು ನಿರ್ಮಿಸುವ ಮತ್ತು ಸುಸ್ಥಿತಿಯಲ್ಲಿ ಕಾಪಾಡುವ ಕಾರ್ಯವನ್ನು ಅತ್ಯಂತ ಶ್ರದ್ಧೆಯಿಂದ ನಿರ್ವಹಿಸುತ್ತಿದ್ದರು. ಹಾಗಾಗಿ ಅಂದಿನ ಕೆರೆಗಳು ಇಂದಿನ ವರೆಗೂ ಉಳಿದುಕೊಂಡು ಬಂದಿವೆ.

ಮುಖ್ಯವಾಗಿ ಅಗ್ರಹಾರ, ದೇವಾಲಯ, ಛತ್ರ, ಮಠ, ಮತ್ತು ಕೆರೆಗಳು ಹಾಗೂ ನೂತನವಾಗಿ ಸ್ಥಾಪಿತವಾದ ವಸತಿ ಪ್ರದೇಶಗಳು ಒಂದಕ್ಕೊಂದು ಅವಲಂಬಿಸಿದ್ದವು ಈ ಹಿನ್ನಲೆಯಲ್ಲಿ ನೋಡಿದಾಗ ಕಲಘಟಗಿ ತಾಲೂಕಿನ ಕೆರೆಗಳು ಹಲವು ಕಾರಣಗಳಿಂದಾಗಿ ನಿರ್ಮಾಣ ಮಾಡಿದ್ದರೂ ವ್ಯವಸಾಯಕ್ಕೆ ನೀರೂ ಒದಗಿಸುವ ಅಲ್ಲಿನ ಜನವಸತಿ ದೈನಂದಿನ ಅವಶ್ಯಕತೆಗಳನ್ನು ಪೂರೈಸುವ ಉದ್ದೇಶಗಳಿಗೆ ನಿರ್ಮಿತವಾಗಿದೆ[೮].

ಕೆರೆಗಳು ಹೇಗೆ ? ಯಾವಾಗ ? ಏಕೆ ಕಟ್ಟಲ್ಪಟ್ಟವು ಎಂಬ ಪ್ರಶ್ನೆಗೆ ಇತಿಹಾಸದಲ್ಲಿ ಸ್ಪಷ್ಟ ಉತ್ತರವಿಲ್ಲ. ಆದರೆ ಪ್ರಾಚೀನ ಕಾಲದಲ್ಲಿ ನವ ಶಿಲಾಯುಗದ ಮಾನವನು ಸ್ವಾಭಾವಿಕವಾಗಿ ಮಳೆ ತಗ್ಗು ಪ್ರದೇಶಗಳಲ್ಲಿ ಸಂಗ್ರಹಗೊಳ್ಳುವುದನ್ನು ಅವಲೋಕಿಸಿದ ನಂತರ ಕೃತಕ ನೀರಿನ ಸೆಲೆಯನ್ನು ಸೃಷ್ಟಿಸಿಕೊಳ್ಳುವುದು ಅನಿವಾರ್ಯವಾಗಿತ್ತು. ಹೀಗೆ ನಿಂತ ನೀರಿನ ಉಪಯೋಗಮಾಡಿಕೊಳ್ಳಲು ಪ್ರಾಚೀನ ಕಾಲದ ಮಾನವನಿಗೆ ಕೆರೆಗಳನ್ನು ಕಟ್ಟಲು ಪ್ರೇರಣೆ ಆಗಿರಬೇಕು. ಮನುಷ್ಯರು ನೆಲೆ ನಿಂತು ಪಶುಪಾಲನೆ ಮತ್ತು ಕೃಷಿಯಲ್ಲಿ ಪಾಲ್ಗೊಂಡ ಮೇಲೆ ಕೆರೆಗಳು ಸೃಷ್ಟಿಯಾಗಬಹುದು. ರಾಜಪ್ರಭುತ್ವ ಬೆಳೆದು ಬಂದ ಮೇಲೆ ಇಂಥ ಕೆರೆಗಳನ್ನು ಕಟ್ಟಿಸುವುದು ರಾಜಧರ್ಮವಾಗಿ ಪರಿಣಮಿಸಿತು. “ಕೆರೆಯಂ ಕಟ್ಟಿಸು ಕಾಲುವೆಯಂ ಸವೆಸು” ಎಂಬಿತ್ಯಾದಿ ಮಾತುಗಳು ಹುಟ್ಟಿ ಜನಪ್ರಿಯವಾದವು. ದಕ್ಷಿಣ ಭಾರತದ ಚರಿತ್ರೆಯಲ್ಲಿ ಚೋಳರು ಕೆರೆ ಕಟ್ಟಿಸುವ ಕಾಯಕವನ್ನು ತಾವು ರಾಜ್ಯ ಸ್ಥಾಪಿಸಿದ ಕಡೆಗಳೆಲ್ಲಾ ವಿಸ್ತರಿಸಿದರು. ಇದೇ ಕೆರೆಯ ಪರಂಪರೆಯನ್ನು ಮಕ್ಕೆಲ್ಲಾ ರಾಜರು ಮುಂದುವರೆಸಿದರು. ಚೋಳರು ತಮ್ಮ ರಾಜ್ಯಾಡಳಿತದಲ್ಲಿ ಕೆರೆಕಟ್ಟೆ ವಾರಿಯಂ, (ಕೆರೆಕಟ್ಟೆ ಸಮಿತಿ) ಎಂಬ ಆಡಳಿತ ವಿಭಾಗವನ್ನೇ ಆರಂಭಿಸಿದ್ದರು. ಸ್ಥಳೀಯ ಆಡಳಿತದ ಅತೀ ಮುಖ್ಯ ಕೆಲಸ ಇದೇ ಆಗಿತ್ತು. ಚೋಳರ ಆಡಳಿತಕ್ಕೊಳಪಟ್ಟ ಕರ್ನಾಟಕದ ಕೋಲಾರ ಮತ್ತು ತುಮಕೂರು ಜಿಲ್ಲೆಗಳಲ್ಲಿ ನೂರಾರು ಕೆರೆಗಳ ಒಂದು ದೊಡ್ಡ ಜಾಲವೇ ಜೀವ ತಳೆದದ್ದು ಈ ಕಾರಣದಿಂದಲೇ. ಕೆರೆ ಕಟ್ಟಿಸುವ ಕಾರ್ಯ ಕೇವಲ ರಾಜ್ಯ ಕಾರ್ಯವಾಗಿರಲಿಲ್ಲ. ಅದು ಸಾಮಾಜಿಕ ಮತ್ತು ಧಾರ್ಮಿಕ ಕಾರ್ಯವಾಗಿತ್ತು. ಆದ್ದರಿಂದಲೇ ರಾಜರಿಗೆ ಕೆರೆ ಕಟ್ಟಿಸುವ ಕೆಲಸ ಕಷ್ಟವಾಗಿರಲಿಲ್ಲ. ಉಳ್ಳವರು ಹಣಸಹಾಯ, ದವಸಧಾನ್ಯದ ಸಹಾಯ ಮಾಡಿದರೆ ದುಡಿಯುವ ಜನರು ಕೆರೆ ನಿರ್ಮಾಣ ಕಾರ್ಯದ ರೂವಾರಿಗಳಾದರು. ಹತ್ತಾರು ವರ್ಷ ಹಿಡಿಯುತ್ತಿದ್ದ ಕೆರೆ ನಿರ್ಮಾಣದ ಕೆಲಸ ದೇವಾಲಯ ನಿರ್ಮಾಣದ ಕೆಲಸಕ್ಕಿಂತ ಶ್ರದ್ಧೆಯಿಂದ ನಡೆಯುತ್ತಿತ್ತು[೯].

ಇಂತಹ ಕೆರೆಗಳ ನಿರ್ಮಾದಲ್ಲಿ ರಾಜ ಮಹಾರಾಜರು, ಮಂತ್ರಿಗಳು, ಸಾಮಂತ ಅಧಿಕಾರಿಗಳು ಅತಿಯಾದ ಶ್ರದ್ದೆ ತೋರಿದ್ದು ಯಾಕೆ? ಈಗಾಗಲೇ ಇದ್ದ ಭಾವಿಗಳು, ಸಣ್ಣ ಸಣ್ಣ ಕಟ್ಟೆಗಳು, ಸ್ವಾಭಾವಿಕ ಕೆರೆಗಳು ಸಾಲದಾದವೇ? ಪಶುಪಾಲನೆಗೆ ಇವರ ವಿಶೇಷ ಕೊಡುಗೆಯೇ ?

ಕೆರೆ ನಿರ್ಮಾಣಕ್ಕೆ ಅತೀ ಉತ್ಸಾಹಕ್ಕೆ ಧಾರ್ಮಿಕ, ಸಾಮಾಜಿಕ, ಆರ್ಥಿಕ ಕಾರಣಗಳಷ್ಟೇ ಕಾರಣವೇ? ಎಂಬಿತ್ಯಾದಿ ಪ್ರಶ್ನೆಗಳ ಜೋತೆಗೆ ಇನ್ನೊಂದು ಅಂಶವನ್ನು ಗಮನಿಸಬಹುದು. ರಾಜರ ಮೊದಲ ಆದ್ಯತೆ "ಜನಕಲ್ಯಾಣ ಆಗಿರಲಿಲ್ಲ, ಅದು ಒಂದು ಅಂಶವಾಗಿತ್ತೆಂಬುದು ನಿಜವಾದರೂ ಅವರ ಆದ್ಯತೆ ತಮ್ಮ ರಾಜ್ಯಗಳ ಅಧಿಕಾರಿಗಳ ರಕ್ಷಣೆ ಅದಕ್ಕೆ ಬೇಕಾದ ಸೈನ್ಯ ಕಟ್ಟುವುದು, ಸೈನ್ಯಕ್ಕೆ ಹೆಚ್ಚುತ್ತಾ ಹೊಗುವುದು, ಕುದುರೆ ಸೈನ್ಯ, ಒಂಟೆ ಸೈನ್ಯ, ಸೈನ್ಯಕ್ಕೆ ಬೇಕಾದ ಶಸ್ತ್ರಾಸ್ತ್ರ, ಆಹಾರ, ಬಟ್ಟೆ ಇತ್ಯಾದಿಗಳನ್ನು ಹೊತ್ತುಕೊಂಡು ಹೊಗಲು ಎತ್ತುಗಳು, ಕತ್ತೆಗಳು, ಹೆಸರಗತ್ತೆಗಳು, ಸೈನ್ಯದೊಂದಿಗೆ ಸಾಗಬೇಕಾಗಿತ್ತು. ಇವೆಲ್ಲವುಗಳೊಂದಿಗೆ ಅಪಾರ ಪ್ರಮಾಣದಲ್ಲಿ ಬೇಕಾಗಿದ್ದ ನೀರನ್ನು ಹೊತ್ತು ಒಯ್ಯುವುದು ಸಾದ್ಯವೇ ಇರಲಿಲ್ಲ ಆದ್ದರಿಂದ ರಾಜರು ಅವರ ಬುದ್ಧಿವಂತ ಮಂತ್ರಿಗಳು ಕಂಡುಹಿಡಿದ ನೀರಮಾರ್ಗ ಈ ಕೆರೆಗಳು, ರಾಜರು ದಂಡಯಾತ್ರೆಗಳಿಗೆ ನೀರೊದಗಿಸುವುದು ಕೆರೆಗಳ ಮೊದಲ ಆದ್ಯತೆಯಾಗಿತ್ತು.

ಅವನ ಅಧಿಕಾರಿಗಳು ಕೆರೆಗಳ ಉಸ್ತವಾರಿಯನ್ನು ನೋಡಿಕೊಳ್ಳುತ್ತಿದ್ದರು. ರಾಜತ್ವದ ಈ ಹಂತದ ಕೆರೆಗಳಿಗೆ ತೂಬುಗಳೇ ಇರಲಿಲ್ಲವೆಂಬುದು ಅವರ ಉದ್ದೇಶವನ್ನು ಸ್ಪಷ್ಟಪಡಿಸುತ್ತದೆ. ಬರಗಾಲ, ಜಲಕ್ಷಾಮ, ಅಲ್ಪ ಸ್ವಲ್ಪ ಜನರಲ್ಲಿನ ಜಾಗೃತಿ, ಬಂಡಾಯ, ಅತೃಪ್ತಿ ಇತ್ಯಾದಿ ಕಾರಣಗಳ ಫಲವಾಗಿ ಜನರ ಯೋಗಕ್ಷೇಮದ ಕಡೆಗೆ ರಾಜರು ಗಮನಹರಿಸಿದರು. ಆಗ ಕೆರೆಗಳ ಮೇಲೆ ಜನರಿಗೆ ಅಲ್ಪ ಅಧಿಕಾರ ಪ್ರಾಪ್ತವಾಯಿತು. ಹೆಚ್ಚುವರಿ ನೀರನ್ನು ಕೃಷಿಗೆ ಬಳಸಲು ತೂಬುಗಳನ್ನು ಅಳವಡಿಸಿದರು. ಇಷ್ಟಾದರೂ ಕೆರೆಗಳ ಹಿಂಭಾಗದ ಭೂಮಿ ಬಹುಕಾಲ ರಾಜರು ಮತ್ತವರ ಜೊತೆಗಿದ್ದ ಬ್ರಾಹ್ಮಣ ಪುರೋಹಿತರ ಹಿಡಿತದಲ್ಲಿತ್ತು.[೧೦] ಈ ಜಮೀನಿನಲ್ಲಿ ಬೆಳೆದ ಬೆಳೆಯನ್ನು ಮಂತ್ರಿಗಳು ಮತ್ತು ಪುರೋಹಿತರಿಗೆ ಮೀಸಲಾಗಿತ್ತು. ದುಡಿತ ಮಾತ್ರ ಬಡವರ ಕಡ್ಡಾಯ ಕರ್ತವ್ಯವಾಗಿತ್ತು. ಹೀಗೆ ಕೆರೆಗಳು, ನದಿಗಳು ಅಕ್ಕ ಪಕ್ಕಗಳ ಭೂ ಪ್ರದೇಶವೆಲ್ಲಾ ಶ್ರೀಮಂತ ಒಡೆತನದಲ್ಲಿತ್ತು. ಏರಿಗೆ ಮಣ್ಣು ಹಾಕುವುದು, ದಡ ಕುಸಿಯದಂತೆ ಏರಿಗೆ ಕಲ್ಲು ಕಟ್ಟುವುದು ಒಡ್ಡರ ಆದ್ಯ ಕರ್ತವ್ಯವಾಗಿತ್ತು. ದಲಿತರು ನೀರನ್ನು ಮುಟ್ಟುವಂತಿರಲಿಲ್ಲ.

ಇಂತಹ ತಮ್ಮದೇ ಅಸಂಖ್ಯಾತ ದಾಳಿಗಳನ್ನು ಇತರ ವೈರಿ ರಾಜ್ಯಗಳ ಕೊನೆ ಇರದ ದಾಳಿಗಳನ್ನು ಸಹಿಸಿ ಸಾಕಾಗಿ ಜನ ರೊಚ್ಚಿಗೆದ್ದು, ದಂಗೆ ಏಳ ತೊಡಗಿದ ಮೇಲೆ ಕೆರೆಗಳಿಗೆ ತೂಬುಗಳು ರಚನೆಯಾಗಿರಬೇಕು. ರಾಜರ ಕಾಲ ಮುಗಿದ ನಂತರ ಹೊಸಕಾಲ ಆರಂಭವಾಯಿತು. ಕಾಲಕಳೆದಂತೆ ನಗರೀಕರಣದಿಂದ ಕೆರೆಗಳ ಊರಿನ ಒತ್ತುವರಿಗೆ ಆರಂಭವಾಯಿತು.

ಚೋಳರ ಕಾಲದಲ್ಲಿ ಕಟ್ಟಲ್ಪಟ್ಟ ಕೆರೆಗಳು ಹೆದ್ದಾರಿಗಳಿಗೆ ಹೊಂದಿಕೊಂಡೆ ಇದ್ದವು. ಈ ಹೆದ್ದಾರಿಗಳು ಕೆರೆಗಳು ಮೊದಲಿಗೆ ತೂಬುಗಳನ್ನು ಹೊಂದಿದ್ದಂತೆ ಕಾಣುವುದಿಲ್ಲ. ಈ ಬಗೆಯ ಕೆರೆಗಳು ಮಾತ್ರ ಬೃಹತ್ ಸೈನ್ಯದ ನೀರಿನ ಅಗತ್ಯವನ್ನು ಪೂರೈಸಲು ಶಕ್ತವಾಗಿದ್ದವು. ಸೈನ್ಯದ ಬಹುಮುಖ್ಯ ಭಾಗವಾಗಿದ್ದ ಪ್ರಾಣಿಗಳಿಗೂ ಈ ನೀರು ಬಳಕೆಯಾಗುತ್ತಿತ್ತು. ಎರಡು ಮೂರು ವರ್ಷ ಮಳೆ ಕೈಕೊಟ್ಟರೂ ಈ ಬಗೆಯ ಕೆರೆಗಳಿಂದ ನೀರಿಗೇನು ದುಸ್ತರವಾಗುತ್ತಿರಲಿಲ್ಲ. ನಾಡು ಬರ ಅನುಭವಿಸುತ್ತಿದ್ದರೂ ಲೂಟಿಗಾಗಿ ರಾಜ್ಯ ಒತ್ತುವರಿಗಾಗಿ, ಕ್ರೀಡೆಗಾಗಿ ಯುದ್ಧಗಳು ಮುಂದುವರೆಯುತ್ತಿದ್ದವು. ದೇಹಲಿ ಸುಲ್ತಾನ ಮತ್ತು ಮೊಗಲ್ ರಾಜರ ಪ್ರವೇಶದಿಂದ ಭಾರತ ಪ್ರದೇಶಗಳ "ಪ್ರಭುತ್ವಕ್ಕಾಗಿ ಸ್ಪರ್ಧೆ" ತೀವ್ರಗೊಂಡು ರೈತ ಬಂಡಾಯಗಳು ಚಿಗುರೊಡೆಯ ತೊಡಗಿದ ಮೇಲೆ "ಉದಾರ ಪ್ರಭುತ್ವ" "ಜನರ ಕಲ್ಪನೆ" ಅಲ್ಪಮಟ್ಟಿಗಾದರೂ ಸ್ಥಾಪಿತವಾಗತೊಡಗಿತು.[೧೦] ಇದರ ಒಂದು ಪರಿಣಾಮದಿಂದ ಕೆರೆ ನೀರಿನ ಮೇಲೆ ರೈತರಿಗೆ ತುಸುಮಟ್ಟಿನ ಹಕ್ಕು ಪ್ರಾಪ್ತವಾಯಿತು. ಇದಕ್ಕೆ ಕೆರೆಯ ಹಿಂಭಾಗದ ಭೂಮಿ ಎಂದೂ ರೈತಾಪಿ ಜನರ ಒಡೆತನದಲ್ಲಿರದೆ ರಾಜ ಪರಿವಾರ, ದೇವಾಲಯ, ಪುರೋಹಿತ ಮತ್ತು ಪುರೋಹಿತರ ದತ್ತಿ ಭೂಮಿಯಾಗಿರುತ್ತಿತ್ತು. ಇದೇ ಪರಿಸ್ಥಿತಿ ಅಲ್ಪ ಸ್ವಲ್ಪ ಬದಲಾಣೆಯೊಂದಿಗೆ ಇಂದಿಗೂ ಮುಂದುವರೆದು, ನದಿ ನೀರು ಮತ್ತು ಅಂತರ್ಜಲದ ಒಡೆತನ ಮೇಲ್ಜಾತಿಗಳಿಗಷ್ಟೇ ವಿಸ್ತಾರಗೊಂಡಿರುವುದು, ಪ್ರಭುತ್ವಗಳು ಯಾರ ಪರ ಎಂಬುದನ್ನು ಸಾಬೀತು ಪಡಿಸುವಂತಿದೆ[೧೧].

ನೀರು, ಜಲ, ಉದಕ, ಗಂಗೆ ಹೀಗೆ ಹತ್ತು ಹಲವು ಹೆಸರುಗಳಿಂದ ಕರೆಸಿಕೊಳ್ಳುವ ನೀರಿಗೆ ಭರತ ಖಂಡದಲ್ಲಿ ಪುರಾಣ ಕಾಳದಿಂದಲೂ ಒತ್ತು ಕೊಡಲಾಗಿದೆ. ಭಗೀರತ ಗಂಗೋದಕವನ್ನು ದೇವಲೋಕದಿಂದ ತಂದನೆಂದು ಪ್ರತೀತಿ. ಋಷ್ಯಶೃಂಗನೆಂಬ ಮುನಿ ಸಂಚಾರಕ್ಕೆ ತೆರಳಿದಡೆಯಲ್ಲೆ ಮಳೆ ಬರುತ್ತಿತ್ತು. ಅಗಸ್ತ್ಯ ಮಹಾಮುನಿ ಸಮುದ್ರವನ್ನೇ ಆಪೋಶನ ತೆಗೆದುಕೊಡಿದ್ದಾನಂತೆ, ದುರ್ಯೋಧನ ಜಲಸ್ತಂನ ವಿದ್ಯೆಯಲ್ಲಿ ಪಾರಂಗತನಾಗಿದ್ದ, ಪಾಂಡವರು ಬಾಯಾರಿ ನೀರಿಗೆ ಹಾರಿ ನಾಲ್ವರು ಅಸುನೀಗಿದ್ದರು, ಧರ್ಮರಾಯ ಯಕ್ಷಪ್ರಶ್ನೆಗೆ ಉತ್ತರಿಸಿ ಅವರೆಲ್ಲರನ್ನು ಬದುಕಿಸಿಕೊಂಡ. ಶಿವ ತನ್ನ ಮಡದಿಯಾದ ಪಾರ್ವತಿಯನ್ನು ತನ್ನ ತೊಡೆಯ ಮೇಲೆ ಕುಳ್ಳರಿಸಿಕೊಂಡರೆ, ನೀರಿನ ಮಾತೆ ಗಂಗಾದೇವಿಯನ್ನು ತನ್ನ ಮುಡಿಯಲ್ಲೆ ಇರಿಸಿಕೊಂಡಿದ್ದಾನೆ. ಭೀಷ್ಮಾಚಾರ್ಯರು ಉತ್ತರಾಯಣ ಪುಣ್ಯಕಾಲಕ್ಕೆ ಕಾಮ ಪ್ರಾಣತ್ಯಾಗಕ್ಕೆ ಸಿದ್ದರಾಗಿದ್ದರು, ಆಗ ಅರ್ಜುನ ನಿಂತಲ್ಲೇ ಬಾಣ ಬಿಟ್ಟು ಗಂಗೆಯನ್ನು ಅದರ ಬಾಯಿಗೆ ಬೀಳುವಂತೆ ಮಾಡಿದ್ದ ರಾಮ ನೀರಿಗಾಗಿ ಬಾಣಬಿಟ್ಟು ನೀರು ಉಕ್ಕುವಂತೆ ಮಾಡಿದ ಕಥೆ ನಮ್ಮ ರಾಜ್ಯದಲ್ಲಿ ಹತ್ತು ಹಲವಾರು ಕಡೆಗಳಲ್ಲಿ ಕೇಳುತ್ತವೆ. ಹೀಗೆ ಪ್ರಾಚೀನ ಕಾಲದಲ್ಲಿ ನೀರಿನ ಉಗಮದ ಬಗ್ಗೆ ಪುರಾಣ, ಐತಿಹ್ಯಗಳ ಮೂಲಕ ತಿಳಿದುಕೊಳ್ಳಬಹುದು.

ಭೂಮಿಯಿಂದ ವಾಯುವಿನಲ್ಲಿ ೧೦ ಕಿ.ಮೀ ಎತ್ತರದವರೆಗೂ ಕಂಡು ಬರುತ್ತದೆ. ನೀರಾವರಿಯು ಮೂಲತಃ ಸಾಗರ, ಸಮುದ್ರ, ಕೆರೆ, ಬಾವಿ, ಕಾಲುವೆ, ಸರೋವರ ಮುಂತಾದದವುಗಳಿಂದ ನೀರು ಬಾಷ್ಪೀಭವನ ಕ್ರಿಯೆಯಿಂದ ವಾಯುಮಂಡಲವನ್ನು ಸೇರಲ್ಪಡುತ್ತವೆ. ಅದರಂತೆ ಆಳ ಪ್ರಮಾಣದಲ್ಲಿ ಮಣ್ಣು ತೇವಾಂಶವನ್ನು ಕಳೆದುಕೊಳ್ಳವುದರಿಂದ ಸಸ್ಯವರ್ಗಗಳ ಬಾಷ್ಪೀಭವನಯಿಂದ ವಿಸರ್ಜನೆಗೊಳಿಸುವುದರಿಂದ ಪ್ರಾಣಿಗಳ ಉಸಿರಾಟ ಹಾಗೂ ಸಾಗರಗಳಲ್ಲಿ ಸಂಭವಿಸುವ ಜ್ವಾಲಾಮುಖಿಗಳಿಂದಲೂ ನೀರು ವಾಯುಮಂಡಲದಲ್ಲಿ ಅನಿಲ ರೂಪದಲ್ಲಿ ಸೇರುತ್ತದೆಯಾದರೂ ಇದರಿಂದಾಗುವ ಬಾಷ್ಪೀಭವನದ ಪ್ರಮಾಣ ಅತ್ಯಂತ ಕಡಿಮೆ. ಆದರೆ ಪ್ರತಿ ವರ್ಷ ಸಾಗರ, ಸರೋವರ, ಸಮುದ್ರ ಪ್ರದೇಶಗಳಿಂದ ೨.೨೫.೬೦೦ ಘನ ಕಿ.ಮೀ ಕೆರೆ, ಬಾವಿ, ಕಾಲುವೆಗಳಿಂದ ೬೧,೧೫೧ ಘನ ಕಿ.ಮೀ ನೀರು ಬಾಷ್ಪೀಭವನಗೊಂಡು ವಾಯುವಿನಲ್ಲಿ ಸೇರುತ್ತದೆ.[೧೫] ಇಷ್ಟೊಂದು ಪ್ರಮಾಣದಲ್ಲಿ ಬಾಷ್ಪೀಭವನ ಹೊಂದಿದ ನೀರು ಮರಳಿ ಭೂಮಿಯ ಕಡೆಗೆ ಮಳೆಯ ರೂಪದಲ್ಲಿ ಬರುವ ಪ್ರಮಾಣ ಶೇ ೯೮,೦೦೦ ಘನ ಕಿ.ಮೀ ಮಾತ್ರವೇ ಆಗಿದೆ[೧೨].

ಭಾರತದಲ್ಲಿ ಮೂರು ಕಡೆ ನೀರಿದೆ. ಅದಕ್ಕೆ ಪರ್ಯಾಯವಾಗಿ ಭೂಮಿ ಇದೆ. ದಕ್ಷಿಣ ಭಾಗದ ಸುತ್ತಲೂ ಜಲಾವೃತದಿಂದ ಕೂಡಿದೆ. ಉತ್ತರ ಭಾಗದಲ್ಲಿ ಹಿಮಾಲಯದಿಂದ ಆವೃತವಾಗಿದ್ದು, ಅಲ್ಲಿ ಹಲವು ನದಿಗಳು ಜನ್ಮ ತಾಳುತ್ತವೆ. ಬೇಸಿಗೆಯಲ್ಲಿ ತುಂಬಿ ಹರಿಯುತ್ತವೆ. ಉಳಿದಂತೆ ಹಿಮರೂಪ ತಾಳುತ್ತವೆ. ಭಾರತವು ಸಮಶಿತೋಷ್ಣ ವಲಯವಾಗಿರುವುದರಿಂದ ಅಧಿಕ ಮಳೆ ಕಡಿಮೆ ಮಳೆ ಹೀಗೆ ಎರಡು ಸ್ವರೂಪದ ಪ್ರದೇಶಗಳಿವೆ. ಉತ್ತರದಲ್ಲಿನ ನದಿಗಳು ಬೇಸಿಗೆಯಲ್ಲಿ ಉಕ್ಕಿ ಹರಿದರೆ, ಋತುಮಾನಗಳಲ್ಲಿ ಹಿಮದಿಂದ ನಿದ್ರಿಸುತ್ತಿರುತ್ತವೆ. ಎತ್ತರದ ಹಿಮಾಲಯ ಶಿಖರ ಶ್ರೇಣಿಗಳಲ್ಲಿ ಹುಟ್ಟುವ ನದಿಗಳು ಹೆಚ್ಚಾಗಿ ಪೂರ್ವಾಭಿಮುಖವಾಗಿ ಹರಿಯುತ್ತವೆ. ಪಶ್ಚಿಮದಿಂದ ಪೂರ್ವಕ್ಕೆ ಹರಿಯುವ ನದಿಗಳು ಹೆಚ್ಚಾಗಿವೆ. ನದಿಗಳಿಂದಾಗಿ ಭಾರತದ ಒಳನಾಡಿನ ನೀರು ಮತ್ತು ಅದರ ಉತ್ಪನ್ನಗಳಿಂದ ಸಮೃದ್ಧವಾಗಿವೆ. ನೂರಾರು ನದಿಗಳು ಭಾರತವನ್ನೇ ಜೀವಂತವಾಗಿಸಿ ಬಿಟ್ಟಿವೆ. ನಿರಂತರ ಇಲ್ಲವೆ ಋತುಮಾನಗಳಿಗುಣವಾಗಿ ಬೇರೆ ಬೇರೆ ಪಾತ್ರವಹಿಸುವ ನದಿಗಳು ಮುಖ್ಯ ಜೀವನ ಶಕ್ತಿಯಾಗಿವೆ. ಸ್ವಾತಂತ್ರೋತ್ತರ ನದಿಗಳ ಅಭಿವೃದ್ಧಿಯಿಂದ ಎಲ್ಲಾ ನದಿಗಳಿಗೂ ಆಣೆಕಟ್ಟುಗಳನ್ನು ಕಟ್ಟಿದ್ದು ಮುಖ್ಯವಾಗಿ ವ್ಯವಸಾಯದ ಅಭಿವೃದ್ಧಿಗಾಗಿ ಮತ್ತು ಹಸಿರು ಕ್ರಾಂತಿಗೆ ನಾಂದಿಯಾಯಿತು. ಭಾರತದ ಆಹಾರ ಸಮಸ್ಯೆಯಿಂದ ಮುಕ್ತವಾಗಿಸಲು ಅಪಾರ ಕಾಡಿನ ಮುಳುಗಡೆ, ಆ ಮೂಲಕ ಜೀವ ವೈವಿದ್ಯತೆಯ ನಾಶ, ಗಿರಿಜನರ ಎತ್ತಂಗಡಿ, ಬೃಹತ್ ಆಣೆಕಟ್ಟು ಮತ್ತು ಉತ್ಪನ್ನಗಳ ಆಗಮನದಿಂದಾಗಿ ಅಭಿವೃದ್ಧಿಯೆಂಬುದು ತೋರಿಕೆಯ ಕಾರ್ಯವಾಯಿತು. ಕಣ್ಣಿಗೆ ಕಾಣುವ ಅಭಿವೃದ್ಧಿ ಅಧಿಕವಾಯಿತು. ನೀರಿನ ಪ್ರಮುಖ ಶೇಖರಣಾ ಕ್ರಮವಾಗಿ ಆಣೆಕಟ್ಟುಗಳು ಹೆಚ್ಚಿನ ಮಹತ್ವವನ್ನು

ಪಡೆದವು. ಭಾರತದಲ್ಲಿ ಚಿರಾಪುಂಜಿಯಂತಹ ಅತೀ ಹೆಚ್ಚು ಮಳೆಯಾಗುವ ಪ್ರದೇಶಕ್ಕಿಂತ ಸಹರಾದಂತ ಮರಭೂಮಿ ಪ್ರದೇಶಗಳು ಇವೆ. ಭಾರತ ಒಂದು ಪರ್ಯಾಯ ದ್ವೀಪ, ಒರತೆ ತೋರೆ, ಹಳ್ಳ, ನದಿ, ಸಮುದ್ರ, ಹೀಗೆ ನೀರಿನ ಸಮೃದ್ದವಾದ ದೇಶ ಆದರೆ ಬಹುತೇಕ ನದಿಗಳು ನೀರು ಬಳಕೆಗಿಂತ ಸಮುದ್ರ ಸೇರುವುದೇ ಅಧಿಕ .ಸಮಶಿತೋಷ್ಣ ಮುಂತಾದ ಭಾರತದಲ್ಲಿ ನಿತ್ಯ ಹರಿದ್ವರ್ಣ ಕಾಡುಗಳು, ಕುರುಚಲು ಗಿಡಗಳು, ಮರಭೂಮಿ ಮೂರು ಬಗೆಯ ಪ್ರದೇಶಗಳಿಂದ ಕೂಡಿದೆ. ಪಶ್ಚಿಮ ಘಟ್ಟಗಳು ಜೀವ ವೈವಿಧ್ಯತೆಗೆ ಪ್ರಸಿದ್ದವಾದವು. ಅತೀ ಹೆಚ್ಚು ಮಳೆಯನ್ನು ತಮ್ಮತ್ತ ಆಕರ್ಷಿಸುವ ಶಕ್ತಿಯನ್ನು ಪಡೆದುಕೊಂಡಿದೆ[೧೩].

ನೀರಿನ ಉಗಮ ಸ್ಥಾನವನ್ನು ಕಂಡು ಹಿಡಿಯಲು ಪ್ರಾಚೀನರು ಅನುಸರಿಸುತ್ತಿದ್ದ ಮಾರ್ಗಗಳ ಬಗೆಗೆ ಕನ್ನಡ ವಿಶ್ವಕೋಶವಾದ ಲೋಕೋಪಕಾರ (೧೦೨೪) ದಲ್ಲಿ ಉದಕಾರ್ಗಳ ಎಂಬ ಅಧ್ಯಾಯದಲ್ಲಿ ಗಿಡಗಳು, ಮರಗಳು, ಬಳ್ಳಿಗಳು ಮತ್ತು ಇತರ ವಿಧವಾದ ಪರಿಸ್ಥಿತಿ ಇವುಗಳ ಪಟ್ಟಿಯನ್ನು ಕೊಟ್ಟು ನೀರಿನ ಮೂಲವನ್ನು ಅವು ತೋರಿಸಿಕೊಡುತ್ತವೆ ಎಂದು ಹೇಳಿವೆ. ಹಾಗೇಯೇ "ಮುಳ್ಳುಗಳಿಲ್ಲದ ಬನ್ನಿವೃಕ್ಷ ಮತ್ತು ದೊಡ್ಡ ಹುತ್ತವಿರುವ ಕಡೆ ಆಳ ಪ್ರಮಾಣ ಅಗೆದರೆ ನೀರು ದೊರೆಯುತ್ತದೆ. ಮತ್ತೊಂದು ಪದ್ಯದ ಪ್ರಕಾರ ಬೆರಿಲ್, ಕಾಗೆಬಂಗಾರ, ಪಾದರಸ ಅಥವಾ ಅತ್ತಿಮರ ಇರುವ ಕಡೆ ಖಂಡಿತವಾಗಿಯೂ ನೀರನ್ನು ಪಡೆಯಬಹುದು.

ಭಾರತದಲ್ಲಿ ಜಲದ ಉಪಯೋಗವನ್ನು ಸಿಂಧೂ ಬಯಲಿನ ನಾಗರಿಕತೆಯಿಂದಲೇ ಬೆಳೆದು ಬಂದಿವೆ ಎಂದು ಗುರುತ್ತಿಸುತ್ತಾರೆ. ಇಲ್ಲಿನ ನೀರಾವರಿ ಪದ್ದತಿಗಳಲ್ಲಿ ಕಾಲುವೆ, ಈಜುಕೋಳ, ಬಾವಿ, ಒಳಚರಂಡಿ ವ್ಯವಸ್ಥೆ, ಸ್ನಾನಗೃಹ, ನಗರಬೀದಿ ಇತರ ಲಕ್ಷಣಗಳು ಕಂಡುಬರುವುದರಿಂದ ನಾಗರಿಕತೆಯ ಮೊದಲ ಹಂತವನ್ನು ನೋಡಬಹುದು. ದಕ್ಷಿಣ ಭಾರತದಲ್ಲಿ ಬೃಹತ್ ಶಿಲಾ ಸಂಸ್ಕೃತಿಯಿಂದಲೂ ನೀರಿನ ಬಳಕೆ ಆರಂಭಗೊಂಡಿತು[೧೪].

ವೇದ ಬ್ರಾಹ್ಮಣಗಳಲ್ಲಿ ನದಿ, ಕೆರೆ, ಕಾಲುವೆಗಳ ಉಲ್ಲೇಖವಿದೆ. ಗಂಗಾ ಬಯಲಿನ ಆರ್ಯರ ಬದುಕು ಸಂಘಟನೆಯಿಂದ ಪ್ರೇರಿತವಾಗಿತ್ತು. ಆರ್ಯರೊಡನೆ ಕಾದಾಡಿದ ಅಸುರರ ಸಮುದ್ರತೀರದಲ್ಲಿ ನೆಲೆಸಿದ್ದರು. ಈ ಕಾಲದಲ್ಲಿ ಭಾರತವು ಕೃಷಿ ಸಂಪದ್ಭರಿತವಾಗಿತ್ತು ಎನ್ನುವುದಕ್ಕೆ ಇಲ್ಲಿನ ವಾಯುಗುಣ, ಮಳೆ, ಬೆಳೆಗಳು ಕಾರಣವಾಗಿವೆ[೧೫].

ತಿರುವಳ್ಳವರ್ ಹೇಳುವಂತೆ ಜಲವಿರದಿದ್ದರೆ ಈ ಜಗತ್ತೇ ನಿರ್ಮಾಣವಾಗುತ್ತಿರಲಿಲ್ಲ. ನೀರು ಇಲ್ಲದಿದ್ದರೆ ಋತುಮಾನಗಳೇ ಸಂಭವಿಸುತ್ತಿರಲಿಲ್ಲ ಎಂಬುದು ನಿರ್ವಿವಾದ ಸಂಗತಿ. ನೀರನ್ನು ಚಿನ್ನಕ್ಕಿಂತ ಅಮೂಲ್ಯವೆಂದು ಜನರು ನಂಬಿದ್ದರು. ಬೃಹತ್ ಶಿಲಾ ಸಂಸ್ಕತಿಯಲ್ಲಿ ನೀರಿನ ಬಳಕೆಯ

ಬಗೆಗೆ ನಿರ್ದಿಷ್ಟ ಕಾಲ ಮಹತ್ವ ಸಿಕ್ಕಂತಾಗಿದೆ. ಈ ಕಾಲಕ್ಕೆ ಸಂಬಂದಪಟ್ಟ ನೆಲೆಗಳ ಉತ್ಖನ್ನ ಮಾಡಿದ್ದು, ಕೃಷ್ಣ, ತುಂಗಭದ್ರಾ, ಕಾವೇರಿನದಿಗಳ ಪರಿಸರದಲ್ಲಿ ಅವು ವ್ಯಾಪಕವಾಗಿವೆ. ಸ್ವಾಭಾವಿಕ ಜಲ ಸಂಪತ್ತು ರಚಿಸಲು ಆಣೆಕಟ್ಟು, ಜಲಾಶಯಗಳು ಹಿಂದೇ ನಿರ್ಮಾಣವಾಗಿದ್ದವು. ಮಳೆ ಬರದಿದ್ದರೂ ನೀರು ಸಂಗ್ರಹಿಸುವ ಕಲೆ ಭಾರತೀಯರಿಗೆ ಈ ಹಿನ್ನಲೆಯಲ್ಲಿ ತಿಳಿದಿತ್ತು. ಶೇಕಡಾ ೯೦ರಷ್ಟು ಬೃಹತ್ ಶಿಲಾ ಸಂಸ್ಕೃತಿಯ ನೆಲೆಗಳಲ್ಲಿ ಕೃತಕ ನೀರಾವರಿ ಲಕ್ಷಣವು ಕಂಡು ಬಂದಿದೆ. ಕ್ರಿ.ಶ. ೧೮೫೦ ರಲ್ಲಿ ಇವುಗಳನ್ನು ಮೊದಲು ಪತ್ತೇ ಹಚ್ಚಿದವರು ಮೆಡೋಸ್ ಟೇಲರ್. ಕೃತಕ ನೀರಾವರಿ ಸ್ಥಳಗಳೆಂದರೆ ಬ್ರಹ್ಮಗಿರಿ, ಚಂದ್ರವಳ್ಳಿ, ಮಸ್ಕಿ, ಕೇರಳ, ತಮಿಳುನಾಡು ಇತ್ಯಾದಿ ಕಡೆಗಳಲ್ಲಿ ಕಂಡು ಬಂದಿವೆ[೧೬].

ಪ್ರಾಚೀನ ಕಾಲದಲ್ಲಿ ನೀರಾವರಿ ಕಾರ್ಯಗಳಲ್ಲಿ ಕೆರೆ, ಕಾಲುವೆ, ಕೋಡಿಗಳ ನಿರ್ಮಾಣ ಮಹತ್ವದ ಧಾರ್ಮಿಕ, ಸಾಮಾಜಿಕ ಕಾರ್ಯಗಳೆಂಬ ವಿಚಾರ ಶಾಸನಗಳಲ್ಲಿವೆ. ಅಂದಿನ ಕಾಲದ ನೀರಾವರಿಯು ಮುಖ್ಯವಾಗಿ ನದಿ, ಬಾವಿ, ಕೆರೆಗಳನ್ನು ಅವಲಂಬಿಸಿದ್ದಿತು. ರಾಜರು ಶ್ರೀಮಂತರು ಮತ್ತು ಗ್ರಾಮ ಸಂಸ್ಥೆಗಳು ಕೆರೆ, ಬಾವಿಗಳನ್ನು ಕಟ್ಟಿಸುವುದು ಶ್ರೇಯಸ್ಕರವೆಂದೇ ನಂಬಿದ್ದರು. ಕಟ್ಟಿಸಿದ ಕೆರೆ–ಬಾವಿಗಳನ್ನು ಯಾರೇ ಆಗಲಿ ಅಂದಿನ ಕಾಲದಲ್ಲಿ ನಾಶಪಡಿಸುವುದು ಅತ್ಯಂತ ಪಾಪಕರ ಭಾವನೆ ಇದ್ದಿತು.

ಈ ದೇಶದ ಎರಡು ಶ್ರೇಷ್ಠ ಮಹಾಕಾವ್ಯಗಳೆಂದರೆ 'ಮಹಾಭಾರತ' ಮತ್ತು 'ರಾಮಾಯಣ' ಮಹಾಭಾರತದ 'ಅನುನಾಶಿಕ ಪರ್ವವು' ಮಹಾರಾಜನಾದಂತವನು ಕೈಗೊಳ್ಳಲುಬೇಕಾದ ಪ್ರಜಾಹಿತಾತ್ಮಕ ಕಾರ್ಯಗಳಲ್ಲಿ ಕೆರೆಗಳ ನಿರ್ಮಾಣವು ಒಂದು ; ಅದಲ್ಲದೇ ನಾಲೆಗಳ(ಕಾಲುವೆ) ನಿರ್ಮಾಣವು ಪ್ರಜಾಹಿತಾತ್ಮಕ ಕೆಲಸವೆಂದು ವಿವರಿಸುತ್ತದೆ.[೧೭] ಮತ್ತೋದು ವಿಶೇಷವೆಂದರೆ ನಾರದನು ಧರ್ಮರಾಯನಿಗೆ ಮಳೆಯನ್ನು ನೆಚ್ಚಿಕೊಂಡು ಬೇಸಾಯಕ್ಕೆ ತೊಡಗಬಾರದೆಂತಲೂ ಹಾಗೂ ಕೆರೆ ಮತ್ತು ಸರೋವರಗಳನ್ನು ನಿರ್ಮಿಸಿಕೊಂಡು ಬೇಸಾಯಕ್ಕೆ ತೊಗಬೇಕು ಎಂದು ಹೇಳುತ್ತಾನೆ. ಪ್ರಾಚೀನ ಭಾರತದಲ್ಲಿ ಹವಾಮಾನವು ಒಂದೇ ರೀತಿಯಾಗಿರದೇ ಮಳೆಯು ಕೆಲವೊಮ್ಮೆ ಬರುತ್ತಿರಲಿಲ್ಲ. ಇದರಿಂದ ಅಂದಿನ ಹವಾಮಾನವನ್ನು ಕುರಿತಂತೆ ನಮ್ಮ ನಿಲುವನ್ನು ಸ್ಪಷ್ಟಪಡಿಸಕೊಳ್ಳಬಹುದು. ಎರಡನೆಯದಾಗಿ ಮಳೆಯು ನೀರಿನ ಪರ್ಯಾಯ ವ್ಯವಸ್ಥೆಯೆಂದು ಕೆರೆ ಮತ್ತು ಸರೋವರ ನಿರ್ಮಾಣಗಳ ಕಾರ್ಯವನ್ನು ಅಂದಿನ ರಾಜರು ಕೈಗೊಳ್ಳುತ್ತಿದ್ದರು. ಪ್ರಾಚೀನ ಭಾರತದ ಕೆರೆಗಳ ನಿರ್ಮಾಣ ಕುರಿತಂತೆ ಈ ಕೆಳಕಂಡ ದಾಖಲೆಗಳು ಪ್ರಮುಖ ಆಕರಗಳಾಗಿವೆ. 'ಪದ್ಮ ಪುರಾಣ'ದಲಲ್ಲಿ ಕೆರೆಗಳ ನಿರ್ಮಾಣದ ಕುರಿತು 'ವಿಷ್ಣು ಧರ್ಮೋತ್ತರ' ಹಾಗೂ 'ದೇವಿ

ಪುರಾಣ'ಗಳು 'ನದಿವಾಹಾಸ್' ಅಂದರೆ ನೀರಾವರಿ ಕಾಲುವೆಗಳ ಬಗೆಗೆ ಮತ್ತು ನದಿ, ಕೆರೆ, ತಟಾಕಗಳ ಬಗೆಗೆ ವಿವರಗಳಿವೆ.

ಕೌಟಿಲ್ಯನ 'ಅರ್ಥಶಾಸ್ತ್ರ'[೧೮] ದಲ್ಲಿ ಆಹಾರದಲ್ಲಿ ಧಾನ್ಯಗಳನ್ನು, ಕೃತಕ ನೀರಾವರಿ ಕಾಲುವೆಗಳಿಂದ, ನೀರನ್ನು ಹರಿಸುವ, ಏತ ನೀರಾವರಿ, ಕಪ್ಪಾಲಿಗಳನ್ನು ಕಾಣುತ್ತೇವೆ.

ಬುದ್ದನ 'ಜಾತಕ ಕಥೆ'[೧೯] ಕೆರೆ ಮತ್ತು ಬೇಸಾಯದ ಬಗೆಗೆ ಕೆಲವು ಉಪಯುಕ್ತ ಮಾಹಿತಿಗಳನ್ನು ಒದಗಿಸುತ್ತವೆ.

ಮೇಗಾಸ್ತಾನಿಸ್‌ನ 'ಇಂಡಿಕಾ'[೨೦] ದಲ್ಲಿ ಭೂಮಿಯ ಅನುಘುಣವಾಗಿ ಕೆರೆಗಳ ನೀರನ್ನು ಸಮರ್ಪಕವಾಗಿ ವಿತರಿಸುವುದು. ನಾಲೆ ಮತ್ತು ತೂಬುಗಳನ್ನು ದುರಸ್ತಿ ಮಾಡಿ ಸುಸ್ಥಿತಿಯಲ್ಲಿ ಇರುವಂತೆ ನೋಡಿಕೊಳ್ಳುತ್ತಿದ್ದರೆಂದು ತಿಳಿದುಬರುತ್ತದೆ.

ಶುಕ್ರನು ರಚಿಸಿದ 'ನೀತಿಸಾರ'[೨೧] ಕೆರೆ ಮತ್ತು ನಾಲೆಗಳ ಬಗೆಗೆ ಮಾಹಿತಿ ಇದೆ. ಆನ ಸಾಮಾನ್ಯರಿಗೆ ನೀರಾವರಿ ಸೌಕರ್ಯ ಒದಗಿಸಿಕೊಟ್ಟ ಪ್ರತಿಫಲವಾಗಿ ತೆರಿಗೆಯನ್ನು ವಿಧಿಸಬೇಕೆಂಬ ಮಾಹಿತಿಯನ್ನು ತಿಳಿಸುವುದು ವಿಶೇಷವಾದ ಸಂಗತಿಯಾಗಿದೆ. ಕಲಘಟಗಿ ತಾಲೂಕಿನಲ್ಲಿ ಹಲವು ಕೆರೆಗಳು ನಿರ್ಮಾಣಗೊಂಡಿವೆ. ಎಂಬುದಕ್ಕೆ ಶಾಸನಗಳು, ಮೌಖಿಕ ಸಾಹಿತ್ಯ ಮತ್ತು ಐತಿಹ್ಯಗಳು ಆಧಾರವಾಗಿವೆ.

**ಕೆರೆಗಳ ನಾಮಾವಳಿಗಳು :**

ಕೆರೆಯನ್ನು ಕಟ್ಟಿಸುವುದು ಧಾರ್ಮಿಕ ಕಾರ್ಯವೆಂದು ದೇವಾಲಯ ನಿರ್ಮಾಣದಷ್ಟೇ ಮಹೋನ್ನತ ಕಾರ್ಯವೆಂಬುದು ನಮ್ಮ ಹಿರಿಯರ ನಂಬಿಕೆಯಾಗಿತ್ತು. ಧಾರ್ಮಿಕ ಭಾವನೆಗಳಿಂದಾಗಿ ಅಂದಿನ ನೀರಾವರಿ ಕಾರ್ಯಕ್ಕೆ ಚಾಲನೆ ದೊರೆಯಿತು.

ಕೆರೆಗಳನ್ನು ಕಟ್ಟಿಸಿ ಅದಕ್ಕೊಂದು ಹೆಸರಿಡುವುದು ಸಾಮಾನ್ಯವಾಗಿತ್ತು. ಕೆರೆಗಳ ನಾಮಾವಳಿಯೆ ಒಂದು ರೋಚಕ ಇತಿಹಾಸ. ಶಬ್ದಾರ್ಥವಾಗಿ ಕೆರೆಯನ್ನು ಕಟ್ಟೆ, ಕುಂಟೆ, ತಟಾಕ, ಸರೋವರ ಎಂಬ ಹೆಸರುಗಳಿಂದ ಕರೆಯಲಾಗುತ್ತದೆ. ಹಳೆಯ ಕಾಲದಲ್ಲಿ ನಿರ್ಮಾಣವಾದ ಕೆರೆಗಳಿಗೆ ನಾಮಕರಣ ಮಾಡಿರುವುದನ್ನು ಈ ಕೆಳಗಿನಂತೆ ವರ್ಗೀಕರಿಸಬಹುದಾಗಿದೆ[೨೪].

೧. ಗಾತ್ರ ಮತ್ತು ಆಕೃತಿಗನುಣವಾದ ಕೆರೆಯ ಹೆಸರುಗಳು

೨. ಪ್ರಭುತ್ವ ಮೂಲದ ಕೆರೆಯ ಹೆಸರುಗಳು

೩. ಧಾರ್ಮಿಕ ಮೂಲದ ಕೆರೆಯ ಹೆಸರುಗಳು

೪. ಸಾಧುಸಂತರ ಹೆಸರಿನ ಕೆರೆಗಳು

೫. ವೃತ್ತಿ ಮೂಲದ ಕೆರೆಯ ಹೆಸರುಗಳು

೬. ಸಸ್ಯ ಮೂಲದ ಕೆರೆಯ ಹೆಸರುಗಳು

೭. ಊರಿನ ಹೆಸರುಗಳೊಂದಿಗೆ ಬೆಸೆದುಕೊಂಡ ಕೆರೆಯ ಹೆಸರುಗಳು

**೧. ಗಾತ್ರ ಮತ್ತು ಆಕೃತಿಗನುಣವಾದ ಕೆರೆಯ ಹೆಸರುಗಳು**

ಒಂದು ಊರಿನಲ್ಲಿ ಒಂದಕ್ಕಿಂತ ಹೆಚ್ಚಿನ ಕೆರೆಗಳಿದ್ದಾಗ ಅವುಗಳನ್ನು ಸುಲಭವಾಗಿ ಗುರುತಿಸಲು ಬೇರೆ ಬೇರೆ ಹೆಸರಿನಿಂದ ಕರೆಯುವುದು ವಾಡಿಕೆ. ಉದಾಹರಣೆಗೆ; ದೇವಿಕೊಪ್ಪದ ಹೀರೆಕೆರೆ, ದುಮ್ಮವಾಡದ ಊರಮುಂದಿನಕೆರೆ, ಜಿನ್ನೂರು ದೊಡ್ಡಕೆರೆ ಇವು ಈ ಪರಿಸರದಲ್ಲಿ ಕಂಡುಬರುವ ದೊಡ್ಡಕೆರೆಯಾಗಿವೆ. ಅದೇ ರೀತಿ ಈ ಪ್ರದೇಸದಲ್ಲಿ ಕೆಲವು ಬೇರೆ ಬೇರೆ ಆಕಾರದ ಕೆರೆಗಳು ಇರುವುದು ಕಂಡುಬಂದಿವೆ. ಉದಾಹರಣೆಗೆ; ಮಡಕಿಹೊನ್ನಳ್ಳಿ ಹೀರೆಕೆರೆ ಅದು ಆಕಾರದಲ್ಲಿ ಉದ್ದವಾದ ಅಥವಾ ಹಳ್ಳದ ರೂಪದ ಕೆರೆಯಾಗಿದೆ, ಸೋಮನಕೊಪ್ಪದ ತೋಪಿನಕೆರೆ ಚೌಕಾಕಾರವಾಗಿದೆ. ಕೆಲವು ಕೆರೆಗಳು ವೃತ್ತಾಕಾರದಲ್ಲಿವೆ ಎಂದು ಹೇಳಬಹುದು. ಇತ್ಯಾದಿ ಕಲಘಟಗಿ ತಾಲೂಕಿನಲ್ಲಿಯೇ ೮-೯ಕೆರೆಗಳಿದ್ದವೆಂದು ಜನರ ಹೇಳಿಕೆ ಕಲಘಟಗಿ ಕಾರವಾರ ರಸ್ತೆಯ ಊರ ಆಚೆಯ ಕೆರೆಯನ್ನು ಮಂಗೇಶಕೆರೆ ಎಂದು ಕರೆಯುವರು.

**೨) ಪ್ರಭುತ್ವ ಮೂಲದ ಕೆರೆಯ ಹೆಸರುಗಳು :**

ಈ ಪರಿಸರದಲ್ಲಿ ಊರ ಗೌಡರು, ಶೆಟ್ಟಿಗರ ಹೆಸರಿನಲ್ಲಿರುವ ಕೆರೆಗಳಿರುವುದು ಕಂಡುಬಂದಿದೆ. ಉದಾಹರಣೆಗೆ: ಕಲಘಟಗಿ ತಾಲೂಕಿನ ಹಲಗನಕಟ್ಟಿ ಗ್ರಾಮದಲ್ಲಿ ಗೌಡರಕೆರೆ ಹಾಗೂ ಗಂಜಿಗಟ್ಟಿ ಗ್ರಾಮದಲ್ಲಿ ಕಾಮಶೆಟ್ಟಿಕೆರೆ ಇವೆ. ಗೌಡರು ಹಾಗೂ ಶೆಟ್ಟಿಗರ ಹೆಸರಿನ ಕೆರೆಗಳು ಬಳಕೆಯಲ್ಲಿವೆ. ಅವು ನೂತನವಾಗಿ ನಿರ್ಮಾಣಗೊಂಡ ಕುಡಿಯುವ ಹಾಗೂ ವ್ಯವಸಾಯಕ್ಕೆ ನೀರನ್ನು ಪೂರೈಸಲು ನಿರ್ಮಿಸಿದ ಕೆರೆಗೆ 'ಗೌಡರ ಕೆರೆ' ಎಂದು ಕರೆಯಲಾಯಿತು. ಈ ಕೆರೆಯ ನೀರನ್ನು ಇಂದಿಗೂ ಉಪಯೋಗಿಸುತ್ತಾರೆ.

**೩) ಧಾರ್ಮಿಕವಾಗಿ ಮೂಲದ ಕೆರೆಯ ಹೆಸರುಗಳು :**

ಗ್ರಾಮದೇವರ, ದೇವತೆಯ, ಹೆಸರಿನಲ್ಲಿ ಕಟ್ಟಿಸಿದ ಕಲ್ಲವ್ವ, ಕಲ್ಲಪ್ಪ, ಗಂಗಮ್ಮ, ರಾಮ, ಭೀಮ, ಹನುಮ, ಬಸವ, ಲಕ್ಷೀ, ದ್ಯಾಮವ್ವ, ಚೌಡವ್ವ ಹೀಗೆ ಅನೇಕ ಕೆರೆಗಳಿವೆ. ಕಲ್ಯಾಣ ನಗರದಲ್ಲಿ ಕಟ್ಟಿದ ತ್ರಿಪುರಾಂತರ ಕೆರೆಯನ್ನು ಹೆಸರಿಸಬಹುದು[೨].

**೪) ಸಾಧುಸಂತರ ಹೆಸರಿನ ಕೆರೆಗಳು :**

ಕಲಘಟಗಿ ತಾಲೂಕಿನ ತಂಬೂರು ಗ್ರಾಮದಲ್ಲಿ ಸಿದ್ದನಭಾವಿ ಇರುವುದು ಕಂಡುಬಂದಿದೆ. ಇದಕ್ಕೆ ಒಳ್ಳೆಯ ಉದಾಹರಣೆ ಎಂದರೆ, ೧೨ನೆಯ ಶತಮಾನದಲ್ಲಿ ಸೊಲ್ಲಾಪುರದಲ್ಲಿ ಶರಣಸಿದ್ದರಾಮ ಕಟ್ಟಿಸಿದ 'ಸಿದ್ದರಾಮೇಶ್ವರ ಕೆರೆ', ರೇವಣಸಿದ್ದೇಶ್ವರ ಕೆರೆಯ ಬಗೆಗೂ ಉಲ್ಲೇಖವಿದೆ. ಶ್ರೀ ರಂಗ ಪಟ್ಟಣದ ಬಳಿಯ ತೊಣ್ಣೂರು ಕೆರೆಯನ್ನು ಶ್ರೀ ರಾಮಾನುಜಾಚಾರ್ಯರ ಕಾಲದಲ್ಲೇ ಕಟ್ಟಲಾಯಿತು[೨೭].

**೫) ಸಸ್ಯದ ಮೂಲ ಹೆಸರಿನ ಕೆರೆಗಳು :**

ಸಸ್ಯದ ಮೂಲದ ಹೆಸರಿನ ಕೆರೆಗಳು ಕರ್ನಾಟಕದಾದ್ಯಂತ ಇವೆ. ಕೆರೆಯನ್ನು ಕಟ್ಟಿದ ಮೇಲೆ ಕೆರೆಯ ಒಡ್ಡಿನ ಹೊರ ಭಾಗದಲ್ಲಿ ಹುಲ್ಲನ್ನು ಬೆಳೆಸುವದು, ಫಲ ಕೊಡುವ ಗಿಡ ಮರಗಳನ್ನು ನೆಡುವುದು ಸಾಮಾನ್ಯವಾದ ಸಂಗತಿ. ಇದರಿಂದ ಮಣ್ಣಿನ ಒಡ್ಡಿನ ಒಡ್ಡು ಜಾರದೆ ಭದ್ರವಾಗಿ ಉಳಿಯಲು ನೆರವಾಗುತ್ತದೆ. ನಮ್ಮ ಹಿರಿಯರು ಕೆರೆ ಕಟ್ಟಿದ ಮೇಲೆ ತಪ್ಪದೇ ಮಾಡುತ್ತಿದ್ದ ಎರಡು ಕಾರ್ಯಗಳೆಂದರೆ ಒಂದು ಮರ ಬೆಳೆಸುವುದು, ಮತ್ತೊಂದು ಗುಡಿ ಕಟ್ಟುವುದು. ಮರಗಳಿಂದಾಗಿ ಪರಿಸರ ತಂಪಾಗಿ ಉಳಿದು, ಪ್ರಾಣಿ ಪಕ್ಷಿಗಳಿಗೆ ಆಶ್ರಯ ದೊರೆಯುತ್ತಿತ್ತು. ಕೆರೆಯ ಒಡ್ಡಿನ ಹತ್ತಿರ ಯಾವ ಜಾತಿಯ ಮರಗಳಿರುತ್ತಿದ್ದವೋ, ಆ ಮರದ ಹೆಸರಿನಿಂದ ಕೆರೆಯನ್ನು ಕಟ್ಟುವುದೂ ವಾಡಿಕೆ[೨೭]. ಉದಾ: ನೆಲ್ಲಿಹಾರವಿಯ ಅತ್ತಿಮರದಕೆರೆ, ಸೋಮನಕೊಪ್ಪದ ತೋಪಿನಕೆರೆ, ಮುತ್ತಗಿಯ ತುಂಬಿಕೆರೆ ಮುಂತಾದವುಗಳನ್ನು ಕಾಣಬಹುದು.

**೬) ಊರಿನ ಹೆಸರುಗಳೊಂದಿಗೆ ಬೆಸೆದುಕೊಂಡ ಕೆರೆಗಳು :**

ಈ ಪ್ರಕಾರ ರಾಜ್ಯಾದಾದ್ಯಂತ ಸಾಕಷ್ಟು ಕೆರೆಗಳಿರುವುದು ಕಂಡುಬರುತ್ತವೆ. ಜಿನ್ನೂರುಕೆರೆ, ಉಗ್ಗಿನ ಕೆರೆ, ಬಗಡಗೆರೆ, ಹಾರೋಗೆರೆ, ತಾವರಗೆರೆ ಕೆರೆಗಳ ನಾಮಾವಳಿಗಳ ಕುರಿತು ಹೆಚ್ಚಿನ ಅಧ್ಯಯನ ನಡೆದಲ್ಲಿ ಇನ್ನೂ ಹಲವಾರು ಹೊಸ ಹೊಸ ವಿಷಯಗಳು ದೊರೆಯುತ್ತವೆ.

**ಕೆರೆಗಳ ವರ್ಗೀಕರಣ :**

ಶಾಸನ ಹಾಗೂ ಹಲವಾರು ಕೃತಿಗಳಲ್ಲಿ ಜಲಾಶಯಗಳನ್ನು ವಿವಿಧ ಹೆಸರುಗಳಿಂದ ಉಲ್ಲೇಖಿಸಿರುವುದು ಕಂಡುಬರುತ್ತದೆ. ನಮ್ಮ ಪೂರ್ವಜರು ಜಲಾಶಯಗಳನ್ನು ನೀರಾವರಿ ಒಂದೇ ಅಲ್ಲದೆ ಬೇರೆ ಬೇರೆ ಉದ್ದೇಶಗಳಿಗೆ ಕೂಡ ನಿರ್ಮಾಣ ಮಾಡುತ್ತಿದ್ದರು. ವಿವಿಧ ರೀತಿಯ ಕೆರೆಗಳ ಪ್ರಕಾರಗಳೆಂದರೆ ಕೆರೆ, ಕುಂಟೆ, ಕಟ್ಟೆ, ಮದಗ, ಸರೋವರ, ತಟಾಕ, ಕೊಳ, ಕಲ್ಯಾಣಿ, ತೀರ್ಥ,

ಪುಷ್ಕರಣಿ, ದೊಣೆ ಇವುಗಳಲ್ಲಿ ಕೆರೆ ಎಂಬುದು ಹೆಚ್ಚು ಗ್ರಂಥಸ್ಥವಾಗಿರುವುದು ತಿಳಿದುಬರುತ್ತದೆ. ಇವುಗಳಲ್ಲಿ ಕೊಳ, ಕಲ್ಯಾಣಿ, ತೀರ್ಥ, ಪುಷ್ಕರಣಿ, ಧಾರ್ಮಿಕ ಜಲಾಶಯಗಳಾಗಿ, ದೇವರ ಆರಾಧನೆಯ ಉದ್ದೇಶ ಹಾಗೂ ದೇವಾಲಯದ ಇತರ ಕಾರ್ಯಗಳಾಗಿ ನಿರ್ಮಾಣವಾದವು. ಸಾಮಾನ್ಯವಾಗಿ ಇವು ದೇವಾಲಯಕ್ಕೆ ಹೊಂದಿಕೊಂಡೆ ಇರುವ ಜಲಾಶಯಗಳು ಉಳಿದವುಗಳು ನೀರಾವರಿ ಹಾಗೂ ಜನಜಾನುವಾರು ಕುಡಿಯಲು ಬಳಸುವ ಜಲಾಶಯಗಳು.

ಕೆರೆಗಳನ್ನು ಅವುಗಳ ಗಾತ್ರ, ಆಕೃತಿ, ಧಾರ್ಮಿಕ ನೀರನ್ನೊದಗಿಸುವ ಮೂಲಕ್ಕನುಗುಣವಾಗಿ ಹೀಗೆ ಬೇರೆ ಬೇರೆಯಾಗಿ ವರ್ಗೀಕರಿಸಬಹುದಾಗಿದೆ[೩೦].

**ಗಾತ್ರಕ್ಕನುಗುಣವಾದ ವರ್ಗೀಕರಣ :**

ಅ) ದೊಡ್ಡ ಕೆರೆ ಬ) ಸಣ್ಣ ಕೆರೆ ಕ) ಕಟ್ಟೆ ಡ) ಕುಂಟೆ

**ಅ) ದೊಡ್ಡ ಕೆರೆ :**

ಒಂದು ಕೆರೆಯ ಜಮೀನಿಗೆ ನೀರುಣಿಸುವ ಸಾಮರ್ಥ್ಯದ ಮೇಲೆ ದೊಡ್ಡ ಕೆರೆ, ಸಣ್ಣ ಕೆರೆ ಎಂದು ವಿಂಗಡಿಸಲಾಗುತ್ತದೆ. ಇವುಗಳೆಲ್ಲಾ ದೇವ ಮಾತೃಕ ಕೆರೆಗಳು ಇರಬಹುದು ನದಿ ಮಾತೃಕ ಕೆರೆಗಳಿರಬಹುದು, ದೊಡ್ಡ ಕೆರೆಯನ್ನು ಹಿರಿಯ, ಪಿರಿಯ ಗುಣವಾಚಕಗಳಿಂದ ನಿರ್ದೇಶಿಸಲಾಗುತ್ತದೆ. ದೊಡ್ಡ ಕೆರೆ ಎಂದರೆ ಸಾಮಾನ್ಯವಾಗಿ ೩೦೦ ಎಕ್ರೆಗಿಂತ ಹೆಚ್ಚು ನೀರಿನ ಸಾಮರ್ಥ್ಯವುಳ್ಳ ಕೆರೆಗಳು. ಕಲಘಟಗಿ ತಾಲೂಕಿನಲ್ಲಿ ದೇವಿಕೊಪ್ಪದ ಹಿರೇಕೆರೆಯು ೪೩೩ ಎಕರೆ ಇದ್ದದ್ದು ಕಂಡು ಬಂದಿದೆ. ಅದೇ ರೀತಿ ದುಮ್ಮವಾಡ ಕೆರೆ ಸಹ ದೊಡ್ಡ ಕೆರೆ ಕೆಲವೊಮ್ಮೆ ಒಂದೇ ಊರಿನಲ್ಲಿ ಹಲವು ಕೆರೆಗಳಿದ್ದಾಗ ಅವುಗಳನ್ನು ಗುರುತಿಸುವುದಕ್ಕಾಗಿ ಸ್ಥಳೀಯವಾಗಿ ದೊಡ್ಡ ಕೆರೆ, ಸಣ್ಣ ಕೆರೆ ಎಂದು ಕರೆಯುವ ರೂಢಿ ಇದೆ. ತಂಬೂರಿನ ಕಲ್ಯಾಣ ಚಾಲುಕ್ಯರ ಕಾಲದ ದೇವಾಲಯದ ಹತ್ತಿರವಿರುವ ಕೆರೆಯನ್ನು ದೊಡ್ಡ ಕೆರೆ ಎಂದು ಕರೆಯುವರು. ಇದಲ್ಲದೇ ಬೇರೆ ಬೇರೆ ಹೆಸರುಗಳಿಂದ ಕರೆಯುವರು. ತಬಕದಹೊನ್ನಳ್ಳಿಯ ಊರೊಳಗಿರುವ ಕೆರೆಯನ್ನು 'ತುಂಬಿಕೆರೆ' ಎಂದು ಕರೆಯುವರು ಕೆರೆಗಳ ನಾಮ ನಿರ್ದೇಶನದ ಬಗ್ಗೆ ಮುಂದೆ ವಿವರಿಸಲಾಗಿದೆ.

**ಬ) ಸಣ್ಣ ಕೆರೆ :**

ಸಾಮಾನ್ಯವಾಗಿ ೩೦೦ ಎಕ್ರೆಗಿಂತ ಕಡಿಮೆ ನೀರಿನ ಸಾಮರ್ಥ್ಯವುಳ್ಳ ಕೆರೆಗಳನ್ನು ಸಣ್ಣ ಕೆರೆ ಎನ್ನುವರು. ಕಲಘಟಗಿ ತಾಲೂಕಿನಲ್ಲಿ ಸಣ್ಣ ನೀರಾವರಿ ಇಲಾಖೆಯವರು ೩೩೦ ಕೆರೆಗಳನ್ನು ಸಣ್ಣ ಕೆರೆಗಳೆಂದು ಗುರುತಿಸಿದ್ದಾರೆ. ಕಲಘಟಗಿಯ ತಾಲೂಕಿನ ಕ್ಷೇತ್ರಕಾರ್ಯ ಸಂದರ್ಭದಲ್ಲಿ ಕೆಲವು

ಸಣ್ಣ ಕೆರೆಗಳು ಇರುವುದು ಕಂಡುಬಂದಿವೆ. ಒಂದೊಂದು ಗ್ರಾಮದಲ್ಲಿ ಎರಡೆರಡು ಕೆರೆಗಳು ಇದ್ದು ಅದರಲ್ಲಿ ಸಣ್ಣ ಕೆರೆಗಳು ಇವೆ. ಅದರಲ್ಲಿ ಪ್ರಮುಖವಾಗಿ ಈ ತಾಲೂಕಿನ ಪರಸಾಪೂರ, ಗಂಜಿಗಟ್ಟಿ, ಸೋಮನಕೊಪ್ಪ ಗ್ರಾಮದಲ್ಲಿ ಚಿಕ್ಕ ಕೆರೆಗಳು ಇವೆ.

## ಅಡಿ ಟಿಪ್ಪಣಿಗಳು :

೧. ಮುನಿರಾಜಪ್ಪ., ಕರ್ನಾಟಕದ ಕೆರೆ ನೀರಾವರಿ ಅಧ್ಯಯನ, ಪುಟ-೮೯
೨. ವಿರುಪಾಕ್ಷಿ ಪೂಜಾರಹಳ್ಳಿ., ಜಲಸಂಬಂಧಿ ಚಳುವಳಿಗಳು, ಪುಟ-೭
೩. ಅದೇ ಪುಟ-೮
೪. ನೀಲತ್ತಹಳ್ಳಿ ಕಸ್ತೂರಿ., ಕರ್ನಾಟಕದಲ್ಲಿ ಕೆರೆ ನೀರಾವರಿ, ಪುಟ-೨೭
೫. ಅದೇ ಪುಟ-೨೮
೬. ಬಸವರಾಜ ಕುಂಚೂರು., ನಮ್ಮೂರು ಕೆರೆಗಳು, ಪುಟ-೪೯
೭. ನೀಲತ್ತಹಳ್ಳಿ ಕಸ್ತೂರಿ., ಕರ್ನಾಟಕದಲ್ಲಿ ಕೆರೆ ನೀರಾವರಿ, ಪುಟ-೨೯
೮. ಅದೇ
೯. ಅದೇ
೧೦. ಅದೇ ಪುಟ-೩೦
೧೧. ನೀಲತ್ತಹಳ್ಳಿ ಕಸ್ತೂರಿ., ಪುರ್ವೋಕ್ತ -೨೮
೧೨. ವಿರುಪಾಕ್ಷಿ ಪೂಜಾರಹಳ್ಳಿ., ಜಲಸಂಬಂಧಿ ಚಳುವಳಿಗಳು, ಪುಟ-೮
೧೩. ಅದೇ
೧೪. ಅದೇ ಪುಟ-೧೦
೧೫. ಅದೇ
೧೬. ಸಿ.ಎಸ್. ವಾಸುದೇವನ್., ಹಂಪಿ ಪರಿಸರದ ಕೆರೆಗಳು, ಪುಟ-೧೪
೧೭. ವಿರುಪಾಕ್ಷಿ ಪೂಜಾರಹಳ್ಳಿ., ಜಲಸಂಬಂಧಿ ಚಳುವಳಿಗಳು, ಪುಟ-೯
೧೮. ಸಿ.ಎಸ್. ವಾಸುದೇವನ್., ಹಂಪಿ ಪರಿಸರದ ಕೆರೆಗಳು, ಪುಟ-೮
೧೯. ಅದೇ ಪುಟ-೯
೨೦. ಅದೇ ಪುಟ-೧೦
೨೧. ಅದೇ
೨೨. ಸಿ.ಎಸ್. ವಾಸುದೇವನ್., ಹಂಪಿ ಪರಿಸರದ ಕೆರೆಗಳು, ಪುಟ-೪
೨೩. ನೀಲತ್ತಹಳ್ಳಿ ಕಸ್ತೂರಿ., ಕರ್ನಾಟಕದಲ್ಲಿ ಕೆರೆ ನೀರಾವರಿ, ಪುಟ-೭
೨೪. ಬಸವರಾಜ ಕುಂಚೂರು., ನಮ್ಮೂರು ಕೆರೆಗಳು, ಪುಟ-೩೪
೨೫. ಅದೇ ಪುಟ-೩೫
೨೬. ಅದೇ ಪುಟ-೩೬
೨೭. ಅದೇ

೨೮. ಅದೇ ಪುಟ-೩೭

೨೯. ಬಸವರಾಜ ಕುಂಚೂರು., ನಮ್ಮೂರು ಕೆರೆಗಳು, ಪುಟ-೬೬

೩೦. ಅದೇ ಪುಟ-೬೭

## ಅಧ್ಯಾಯ-ನಾಲ್ಕು

# ಕಲಘಟಗಿ ತಾಲೂಕಿನ ಪ್ರಮುಖ ಕೆರೆಗಳು

ಧಾರವಾಡ ಜಿಲ್ಲೆಯ ಐದು ತಾಲೂಕುಗಳಲ್ಲಿ ಒಂದಾದ ಅದರಲ್ಲೂ ಮಲೆನಾಡು ಪ್ರದೇಶದಿಂದ ಆವರಿಸಿಕೊಂಡಿರುವ ಕಲಘಟಗಿ ತಾಲೂಕಿನಲ್ಲಿ ಸುಮಾರು 390 ಕೆರೆಗಳಿವೆ. ಅದರಲ್ಲಿ ಸಣ್ಣ ಕೆರೆಗಳು 330 ಹಾಗೂ ದೊಡ್ಡ ಕೆರೆಗಳು 59 ಇವೆ. ಅದರಲ್ಲಿ ಅಧ್ಯಯನಕ್ಕೆ ತಾಲೂಕಿನ ಕೆಲವು ಪ್ರಮುಖ ಕೆರೆಗಳನ್ನು ಕುರಿತು ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ. ಇವುಗಳಲ್ಲಿ ಕೆಲವು ಕೆರೆಗಳು ಪ್ರಾಚೀನ ಕಾಲದ ಕೆರೆಗಳಾಗಿವೆ ಎಂದು ಶಾಸನಗಳ ಮೂಲಕ ತಿಳಿದುಕೊಳ್ಳಲಾಗಿದೆ. ಅದೇರೀತಿ ಕೆಲವು ಕೆರೆಗಳು ತುಂಬಾ ವಿಸ್ತಾರವಾಗಿವೆ ಎಂದು ಅಧ್ಯಯನದ ಮೂಲಕ ತಿಳಿದು ಬಂದಿದೆ. ಹೆಚ್ಚಾಗಿ ಇಲ್ಲಿನ ಕೆರೆಗಳು ಬ್ರಿಟಿಷರ ಕಾಲದಲ್ಲಿ ನಿರ್ಮಾಣವಾದ ಕೆರೆಗಳು ಇರುವುದು ಕಂಡುಬಂದಿವೆ. ಅವುಗಳನ್ನು ಈ ಕೆಳಗಿನಂತೆ ಚರ್ಚಿಸಲಾಗಿದೆ.

### ೧. ಸಂಗಮೇಶ್ವರ ಹೊಸಕೆರೆ

ಸಂಗಮೇಶ್ವರವು ಕಲಘಟಗಿ ತಾಲೂಕಿನ ಒಂದು ಐತಿಹಾಸಿಕ ಗ್ರಾಮ. ಕಲಘಟಗಿಯಿಂದ ದಕ್ಷಿಣಕ್ಕೆ ೧೪ ಕಿ.ಮೀ ಮತ್ತು ದೇವಿಕೊಪ್ಪದಿಂದ ಪಶ್ಚಿಮಕ್ಕೆ ೬ ಕಿ.ಮೀ ಅಂತರದಲ್ಲಿದೆ. ಈ ಪ್ರಾಚೀನ ಶಾಸನಗಳಲ್ಲಿ ಸಂಗಮೇಶ್ವರ ಎಂದು ಉಲ್ಲೇಖಿತಗೊಂಡಿದ್ದು ಪಲಸಿಗೆ-೧೨೦೦೦, ಕೊಂಕಣ-೯೦೦ ಕ್ಕೆ ಸೇರಿತ್ತು ಇಲ್ಲಿಂದ ಈವರೆಗೆ ೩ ಶಾಸನಗಳು ವರದಿಯಾಗಿವೆ ಅವುಗಳಲ್ಲಿ ಕ್ರಿ.ಶ.೧೦೬೮, ೧೦೬೮ ಮತ್ತು ೧೦೮೦ ಎಂದು ಮತ್ತು ಈ ಶಾಸನಗಳಲ್ಲಿ ೧೦೬೮ ಶಾಸನವು ಅತ್ಯಂತ ಹಳೆಯದಾಗಿದೆ. ಶಾಸನವು ಜಯಕೇಶದೇವನಿಗೆ ಸಂಬಂಧಿಸಿದೆ ಒಂದನೆಯ ಜಯಕೇಶಿ ಲೆಂಕಚೆಟ್ಟಿ ಗಾವುಂಡ ಮತ್ತು ಹಲ್ಲು ಗಾವುಂಡರು ಗೋನಿಯದೇವರ ಶಿಷ್ಯ ಶಾಂತಗಾವುಂಡನು ಶಿವಾಲಯದಲ್ಲಿನ ದೇವರ ನೈವೇದ್ಯಕ್ಕೆಂದು ೨ಮತ್ತರು ಗದ್ದೆಯನ್ನು ಬಿಟ್ಟ ಉಲ್ಲೇಖವಿದೆ. ಕಲ್ಮೇಶ್ವರ ದೇವರ ತೊಲೆಯಲ್ಲಿ ಇರುವ ೧೦೮೦ರ ಶಾಸನ ಮಹಾಮಂಡಳೇಶ್ವರರ ಗೊವಲದೇವ ಪಲಸಿಗೆ-೧೨೦೦೦, ಕೊಂಕಣ-೯೦೦ ನ್ನು ರಾಜಧಾನಿ ಅನಿಲಾಪುರದಿಂದ ಆಳುತ್ತಿರುವಾಗ, ಮಾರಸಿಂಗ ಗಾವುಂಡನ ಮಗ ನಾಗಣಂ ಸಾಂತಗಾವುಂಡನು ಮಾಡಿಸಿದ ಶಿವಾಲಯಕ್ಕೆ ೫ ಗದ್ಯಾಣವನ್ನು ಹಾಗೆಯೇ ಪ್ರತಿ ತಿಂಗಳು ಎಣ್ಣೆಯನ್ನು ಕೊಟ್ಟ ವಿಷಯವಿದೆ. ೧೦೬೮ರ ಶಾಸನ ಬನವಾಸಿ ಪುರವರಾಧೀಶ್ವರನಾದ ಜಯಕೇಶದೇವನು ಹಲಸಿರ ಪನ್ನಿಚ್ಛಾಸಿರ ಮತ್ತು ಕೊಂಕಣ-೯೦೦ ನ್ನು ಆಳುತ್ತಿರುವಾಗ ಆತನ ಲಂಕಚಟ್ಟಿ ಗಾವುಂಡನು ಪುರ್ವೋಕ್ತ ದಿನದಂದು ಬಳಿಗಟ್ಟಿ ದಿನದಂದು

ಕೆರೆಯ ಕೆಳಗೆ ಗುಣಿಗನ ೨ಮತ್ತರು ಗದ್ದೆ, ಒಂದು ಖಂಡುಗ ಬೆಳೆಯ ಭೂಮಿ ಬಿಟ್ಟರು ಎಂಬ ಉಲ್ಲೇಖವಿದೆ.

ಈ ಕೆರೆಯನ್ನು ಕುಬೇರಪ್ಪ ರಾಚೋಟಕರ ಎಂಬುವರು ಕಟ್ಟಿಸಿದರು ಎಂದು ಆ ಊರಿನ ಗ್ರಾಮಸ್ಥರ ಮೂಲಕ ತಿಳಿದುಬಂದಿದೆ. ಹೊಸಕೆರೆಯು ಊರಿನ ಹೊರಗಡೆ ಕಂಡುಬಂದಿದೆ. ಅದು ಇಲ್ಲಿಯ ಜನರ ಜೀವಾಳವಾಗಿದೆ. ಈ ನೀರನ್ನು ಜನರು ಕುಡಿಯಲು ಮತ್ತು ಕೃಷಿಗೆ ಉಪಯೋಗಿಸುತ್ತಾರೆ. ಕೆರೆಯು ಮಣ್ಣಿನ ಏರಿಯನ್ನು ಹೊಂದಿದ್ದು, ಒಳಭಾಗವು ದಪ್ಪ-ದಪ್ಪ ಕಲ್ಲುಗಳಿಂದ ನಿರ್ಮಿಸಲ್ಪಟ್ಟಿದ್ದು, ಹೊರಭಾಗವು ಮಣ್ಣಿನ ಏರಿಯನ್ನು ಒಳಗೊಂಡಿದೆ. ದಕ್ಷಿಣಾಭಿಮುಖವಾಗಿ ಕೆರೆಗೆ ನೀರು ಬಂದು ಸಂಗ್ರಹವಾಗುತ್ತದೆ. ಈ ಕೆರೆಗೆ ಕ್ವಾಟಿಮನಿಯಿಂದ ಮತ್ತು ದೇವಿಕೊಪ್ಪದಿಂದ ನೀರು ಕಾಲುವೆ ಮೂಲಕ ಬಂದು ಸೇರುತ್ತದೆ. ಕೆರೆಯ ಪಕ್ಕದಲ್ಲಿ ಮಾರುತಿ ದೇವಾಲಯವಿದ್ದು, ಅದು ಕಲಘಟಗಿಕರ ಎಂಬುವರ ಹೊಲದಲ್ಲಿ ಕಂಡುಬಂದಿದೆ. ಮತ್ತು ಒಂದು ಉಬ್ಬಗಡ್ಡವು ಸಹ ಕೆರೆಯ ಏರಿಯ ಪಕ್ಕದಲ್ಲಿ ಅದು ವೃತ್ತಾಕಾದಲ್ಲಿದೆ. ಈ ಪ್ರದೇಶವು ಸುತ್ತಲೂ ಬೆಟ್ಟ-ಗುಡ್ಡಗಳಿಂದ ಆವರಿಸಿಕೊಂಡಿದೆ. ಈ ಗ್ರಾಮದಲ್ಲಿ ಸುಮಾರು ೪೦೦೦ ಸಾವಿರ ಜನಸಂಖ್ಯೆಯನ್ನು ಹೊಂದಿದೆ ಬರಗಾಲ ಕಾಮಗಾರಿ ಯೋಜನೆಯಡಿಯಲ್ಲಿ ಈ ಕೆರೆಯ ಹೂಳೆತ್ತಲಾಗಿದೆ. ಇದು ಅರೆಮಲೆನಾಡು ಪ್ರದೇಶವಾಗಿದ್ದು, ಇಲ್ಲಿನ ಜನರು ಕೃಷಿಯನ್ನು ಅವಲಂಬಿಸಿದ್ದಾರೆ. ಈ ಕೆರೆಯ ಏರಿಯ ಉದ್ದ ೮೦೦ ಮೀ ಇರುವುದು ಕಂಡುಬಂದಿದೆ. ಮತ್ತು ಕೆರೆಗೆ ಹೊಂದಿಕೊಂಡಂತೆ ಎರಡು ತೂಬುಗಳನ್ನು ಸಹ ಇಲ್ಲಿ ನಿರ್ಮಾಣ ಮಾಡಿದ್ದಾರೆ.

**೨. ಜಿನ್ನೂರು ದೊಡ್ಡಕೆರೆ**

ಕಲಘಟಗಿ ತಾಲೂಕಿನ ಒಂದು ಐತಿಹಾಸಿಕ ಗ್ರಾಮವಾದ ಜಿನ್ನೂರು ತಾಲೂಕು ಕೇಂದ್ರದಿಂದ ೧೭ ಕಿ. ಮೀ. ಅಂತರದಲ್ಲಿದೆ. ಈ ಗ್ರಾಮದಿಂದ ಪೂರ್ವಕ್ಕೆ ಕೆರೆಯು ಕಂಡುಬಂದಿದ್ದು ಇದು ಅಲ್ಲಿಯ ಜನರ ಜೀವಾಳವಾಗಿದೆ. ಕ್ರಿ.ಶ. ೧೧೩೮ ರ ಶಾಸನದಲ್ಲಿ ಹೆಗ್ಗಡೆ ಬೀಚ್ಚಣ್ಣನು ಸಾಂತಗಾವುಂಡ ಪಾದಪೂಜೆ ಮಾಡಿ ಗ್ರಾಮೇಶ್ವರ ದೇವರಿಗೆ ನೈವೇದ್ಯಕ್ಕೆ ಹೊಸಗೆರೆಯ ಹರಿಯ ಗದ್ದೆ ಕಮ್ಮ-೪೦೦ ಬಿಟ್ಟ ಉಲ್ಲೇಖವಿದೆ. ಅದೇರೀತಿಯಾಗಿ ಲವಳರ ಬೀಚಗಾವುಂಡ ಗಾವುಂಡ ಗ್ರಾಮೇಶ್ವರ ದೇವರಿಗೆ ನೈವೇದ್ಯಕ್ಕೆ ಯರಿಕೆರೆಯ ಮೊದಲೇರಿಯ ಗದ್ದೆ ಕಮ್ಮ-೫೨೫ನ್ನು ಸಾಂತಗಾವುಂಡ ಸಂಕದಾಸಿ ಪಂಡಿತ ದೇವರ ಪಾದಗಳಿಗರ್ಪಿಸಿ ಬಿಟ್ಟನು. ಕೊಂಡಸಬಲಕಣ ಮುದ್ದಗಾವುಂಡನ ಪಾದಪೂಜೆ ಮಾಡಿ ಗ್ರಾಮೇಶ್ವರ ದೇವರಿಗೆ ನೈವೇದ್ಯಕ್ಕೆ ಹೊಸಗೆರೆಯ ಹರಿಯ ಗದ್ದೆ ಕಮ್ಮ-೧೨೫ನ್ನು ಬಿಟ್ಟನು. ಈ ದತ್ತಿಯ ವಿಷಯದ ನಂತರ ಶಾಸನ ತ್ರುಟಿತವಾಗಿದ್ದು, ನಂತರ ಮೂಲಗಾರ ಬಾಸಂತಕಬ್ಬೆ ಸಾಂತಗಾವುಂಡ ಪಾದಪೂಜೆ ಮಾಡಿ ಗ್ರಾಮೇಶ್ವರ ದೇವರಿಗೆ

ನೈವೇದ್ಯಕ್ಕೆಂದು ಹಿರಿಯಗೆರೆಯ ಬಚ್ಚಲಕೆಳಗೆ ಗದ್ದೆಕಮ್ಮ-೫ ಮತ್ತೆ ತೆಲ್ಲಗರುಕ್ಕಲು ದೇವರ ಸೊಡರೆಣ್ಣೆಗೆರೆದು ಕೊಟ್ಟ ಉಲ್ಲೇಖವಿದೆ[೨].

ದೊಡ್ಡಕೆರೆಗೆ ಅಡವಿ ಸೋಮಾಪುರದಿಂದ ನೀರು ಕಾಲುವೆ ಮುಖಾಂತರವಾಗಿ ಬಂದು ಸಂಗ್ರಹಣೆಯಾಗುತ್ತದೆ. ಈ ಕೆರೆಯು ಪೂರ್ವಾಭಿಮುಖವಾಗಿದ್ದು, ಊರಿನ ಮದ್ಯಕೆರೆ ಇರುವುದು ಕಂಡುಬಂದಿದೆ. ಹಿರಿಯ ತಲೆಮಾರಿನವರು ಈ ಕೆರೆಯ ನೀರನ್ನು ಕುಡಿಯಲು ಬಳಸುತ್ತಿದ್ದರು. ಈ ಕೆರೆಯ ಮೇಲೆ ಕಲ್ಯಾಣ ಚಾಲುಕ್ಯರ ಕಾಲದ ಕಲ್ಮೇಶ್ವರ ದೇವಾಲಯ ಇರುವುದರಿಂದ ಇದು ೧೨ನೇ ಶತಮಾನದಲ್ಲಿ ನಿರ್ಮಾಣವಾಗಿರಬಹುದು ಎಂದು ಹೇಳಲಾಗಿದೆ. ಅದೇರೀತಿ ಒಂದು ವೀರಗಲ್ಲು ಪಶ್ಚಿಮಾಭಿಮುಖವಾಗಿರುವುದು ಕಂಡುಬಂದಿದೆ. ಜಿನ್ನೂರು ಗ್ರಾಮದ ಜನರು ಕೃಷಿಯನ್ನು ಅವಲಂಬಿಸಿದ್ದಾರೆ. ಮೂಲತಃ ಜಿನ್ನೂರು ಕೆರೆಗೆ ಜಿಗಳೂರಿನ ಬೆಣ್ಣೆಹಳ್ಳದಿಂದ ಅಡವಿ ಸೋಮಾಪುರಕ್ಕೆ ನಂತರ  ಕೆರೆಗೆ ಕಾಲುವೆ ಮುಖಾಂತರ ಬಂದು ಸೇರುತ್ತದೆ. ಕೆರೆಯ ಏರಿಯು ಎರಡು ಮೀ. ಅಗಲವಿದೆ. ಈ ಕೆರೆಯಲ್ಲಿ ೧೦ಆಳ ನೀರು ಸಂಗ್ರಹವಾಗುತ್ತದೆ. ಕೆರೆಯ ನೀರನ್ನು ಜನರು ತಮ್ಮ ಗದ್ದೆಗಳಿಗೆ ಬೇಸಾಯವನ್ನು ಮಾಡಲು ಉಪಯೋಗಿಸಿಕೊಳ್ಳುತ್ತಾರೆ. ಕೆರೆಯ ಏರಿಯು ೫೦೦ ಮೀ.ಉದ್ದವಿದೆ.

**೩. ಮುತ್ತಗಿ ತುಂಬಿಕೆರೆ**

ಮುತ್ತಗಿ ಕಲಘಟಗಿಯಿಂದ ಉತ್ತರಕ್ಕೆ ಹತ್ತು ಕಿ.ಮೀ. ಅಂತರವಿದೆ. ಇದು ಕಲ್ಯಾಣ ಚಾಲುಕ್ಯರ ಮಹಾಮಂಡಳೇಶ್ವರರಾದ ಗೋವೆ ಕದಂಬರ ಆಳ್ವಿಕೆಯ ಕಾಲದಲ್ಲಿ ಪ್ರಮುಖ ಪಟ್ಟಣವಾಗಿತ್ತು. ಈ ಗ್ರಾಮವು ಅಂದು ಮಾರಜವಾಡಿ ನಾಡಿನ ಹುಲ್ಲಂಬಿ ಏಪತ್ತು ಆಡಳಿತ ವಿಭಾಗದಲ್ಲಿ ಸೇರ್ಪಡೆಯಾಗಿತ್ತು. ಜೈನ, ಶೈವ, ವೈಷ್ಣವ ಧರ್ಮಗಳ ಸಂಗಮ ಸ್ಥಾನವಾಗಿದ್ದ ಇಲ್ಲಿ ಆಳರಸರಾದಿ ಅಧಿಕಾರಿಗಳು ಮತ್ತು ಪ್ರಜೆಗಳ ಕೆಲವು ದೇವಾಲಯಗಳು(ಕಲಿದೇವಸ್ವಾಮಿ, ಮಲ್ಲಿದೇವ, ಸೋಮನಾಥ, ಸುಳ್ಳೇಶ್ವರ ಇತ್ಯಾದಿ) ಮತ್ತು ಬಸದಿಗಳನ್ನು(ಪಾರ್ಶ್ವನಾಥ, ನೇಮಿನಾಥ) ನಿರ್ಮಿಸಿ, ಉದಾರವಾಗಿ ದಾನದತ್ತಿಗಳನ್ನು ಕೊಡಮಾಡಿರುವುದು ಸಮಕಾಲೀನ ಶಾಸನಗಳಲ್ಲಿ ದಾಖಲಾಗಿದೆ. ಈ ಗ್ರಾಮವು ಸ್ಥಳಿಯ ಶಾಸನಗಳಲ್ಲಿ 'ಮುರ್ತ್ತಗೆ' ಎಂದು ಉಲ್ಲೇಖಿತವಾಗಿದೆ[೩].

ಪೇರ್ಮಾಡಿದೇವನು ಕೊಂಕಣ-೯೦೦, ಪಲಸಿಗೆ-೧೨೦೦೦, ಕವಡಿದ್ವೀಪ-೧,೨೫,೦೦೦ವನ್ನು ಗೋವೆ ರಾಜಧಾನಿಯಿಂದ ಆಳುತ್ತಿದ್ದ, ಪೇರ್ಮಾಡಿದೇವನು ಮುತ್ತಗೆಯ ದೊಡ್ಡಗಾವುಂಡ ಮತ್ತು ಚಿಕ್ಕಬಮ್ಮಗಾವುಂಡ ಸೇರಿ ಕೆರೆಯ ಜಿರ್ಣೋದ್ದಾರಕ್ಕಾಗಿ ಕೆರೆಯ ಕೆಳಗಿನ ಮೊದಲೇರಿಯಲ್ಲಿ ೨೦೦ ಸ್ಥಳದ ತೋಟದ ಹತ್ತಿರ ದಕ್ಷಿಣದ ಕಡೆಯಲ್ಲಿ ಶಿವಚಿತ್ತಗೇಯಿ

ಅರವತ್ತಲು ಗದ್ದೆ ಆ ತೋಟದ ಪಶ್ಚಿಮದ ಕೋಡಿಯಲ್ಲಿ ಅರಳಿಯ ಪಕ್ಕದ ಮತ್ತರು-೧ ಗದ್ದೆಯನ್ನು ಕೊಟ್ಟರು. ಈ ಧರ್ಮದ ಯೋಗಕ್ಷೇಮವನ್ನು ಗೌಂಡುಗಳು ಅರವ್ವರು ನೋಡಿಕೊಳ್ಳುವರು.

ಮುತ್ತಗಿಯ ತುಂಬಿಕೆರೆಗೆ ತುಂಬಿಕೆರೆ ಎಂದು ಹೆಸರು ಬರಲು ಕಾರಣ ಆ ಕೆರೆಯು ವರ್ಷಪೂರ್ತಿ ತುಂಬಿರುವುದರಿಂದ ಅದಕ್ಕೆ ತುಂಬಿಕೆರೆ ಎಂದು ಹೆಸರು ಬಂದಿದೆ ಎಂದು ಹೇಳಬಹುದಾಗಿದೆ. ಈ ಕೆರೆಯನ್ನು ಊರಿನ ಗ್ರಾಮಸ್ಥರು ನಿರ್ಮಿಸಿದ್ದಾರೆ. ಕೆರೆಯ ಪಕ್ಕದಲ್ಲಿ ಗೋವೆ ಕದಂಬರ ಕಾಲದ ರಾಮಲಿಂಗೇಶ್ವರ ದೇವಾಲಯವಿದ್ದು ದೇವಾಲಯದ ಎಡಪಾರ್ಶ್ವಕ್ಕೆ ಗಣಪತಿ ಮೂರ್ತಿ ಹಾಗೂ ಬಲಪಾರ್ಶ್ವಕ್ಕೆ ನಂದಿ ಮೂರ್ತಿ ಇರುವುದು ಕಂಡುಬಂದಿದೆ. ಈ ಕೆರೆಯು ಗ್ರಾಮದಿಂದ ಪಶ್ಚಿಮ ದಿಕ್ಕಿನಲ್ಲಿದ್ದು ಇದು ಮಳೆಯಾಶ್ರಿತ ಕೆರೆಯಾಗಿದೆ. ಈ ಕೆರೆಯ ಪಕ್ಕದಲ್ಲಿ ಇನ್ನೊಂದು ಕೆರೆಯಿದ್ದು ಅದು ಕುಡಿಯುವ ನೀರಿನ ಕೆರೆಯಾಗಿದೆ. ಕೆರೆಯ ಹತ್ತಿರದಲ್ಲಿರುವಂತ ಬನ್ನಿಮರವನ್ನು ಆ ಊರಿನ ನಾಗರೀಕರು ಶಿವರಾತ್ರಿಯ ದಿನದಂದು ಆ ಊರಿನವರು ಸೇರಿ ಅದಕ್ಕೆ ಪೂಜೆಯನ್ನು ಅರ್ಪಿಸಿ ಎಲ್ಲ ಗ್ರಾಮಸ್ಥರು ಅಲ್ಲಿಯೇ ಮೂರು ದಿನಗಳ ಕಾಲ ರಾತ್ರಿವೇಳೆ ಜಾಗರಣೆಯನ್ನು ಮಾಡುತ್ತಾರೆ. ಇದು ಆ ಊರಿನ ಜನರ ನಂಬಿಕೆಯಾಗಿದೆ ಎಂದು ಹೇಳಬಹುದು. ಈ ತುಂಬಿಕೆರೆಗೆ ಕಾಲುವೆ ಮೂಲಕ ಮಳೆ ನೀರು ಬಂದು ಸಂಗ್ರಹವಾಗುತ್ತದೆ. ಇಲ್ಲಿಯ ಜನರು ಕೃಷಿಯನ್ನು ಅವಂಬಿಸಿದ್ದಾರೆ. ಇದು ಕೂಡ ಪ್ರಾಚೀನ ಕಾಲದ ಕೆರೆಯಾಗಿದೆ ಎಂದು ಹೇಳಬಹುದು. ಕೆರೆಯ ಏರಿಯು ೫೦೦ ಮೀ ಉದ್ದವಿದೆ. ಆ ಕೆರೆಯಲ್ಲಿ ಒಂದು ಕಟ್ಟೆಯನ್ನು ಸಹ ನಿರ್ಮಿಸಿದ್ದಾರೆ.

### ೪. ಮಲಕನಕೊಪ್ಪ ಕಲಕೇರಿ

ಮಲಕನಕೊಪ್ಪವು ಕಲಘಟಗಿಯಿಂದ ಪೂರ್ವಕ್ಕೆ ಎಂಟು ಕಿ.ಮೀ. ಅಂತರದಲ್ಲಿದೆ. ಸ್ಥಳೀಯ ಕೆರೆಯ ಏರಿಯ ಮೇಲಿರುವ ಕ್ರಿ.ಶ. ೧೧೦೩ ರ ಶಾಸನದಲ್ಲಿ ಕಲ್ಯಾಣ ಚಾಲುಕ್ಯರ ೬ನೆಯ ವಿಕ್ರಮಾದಿತ್ಯನ ಮಹಾಮಂಡಳೇಶ್ವರ ಗೋವೆ ಕದಂಬರ ಮುಮ್ಮಡಿ ಗೊವಲದೇವನ ಆಳ್ವಿಕೆಯ ಸಂದರ್ಭದಲ್ಲಿ ಪುಲಿಗೋಡ ಬಮ್ಮಿಶೆಟ್ಟಿ ಬಸದಿಯನ್ನು ನಿರ್ಮಿಸಿ, ಇದರ ಧಾರ್ಮಿಕ ಚಟುವಟಿಕೆಗಳಿಗೆ ಯಾಪನೀಯ ಸಂಘದ ಮೈಳಾಪಾನ್ವಯದ ಕಾರೆಯ ಗುಣ ಪರಂಪರೆಯ ಶಾಂತವೀರಮುನಿಯ ಪಾದಗಳನ್ನು ತೊಳೆದು ಗದ್ದೆ, ಎರಡನೂರು ಕಮ್ಮ ಹೂದೋಟ, ಮನೆಗಳು ಮತ್ತು ಎಣ್ಣೆಯನ್ನು ದಾನಮಾಡಿದ ವಿವರಗಳಿವೆ[೪]. ಈ ದಾನಗಳನ್ನು ಸ್ಥಳೀಯ ಅರುವತ್ತೊಕ್ಕಲು, ಗಾವುಂಡರು ಮತ್ತು ವಸುರೇಶ್ವರರಿಗೆ ರಕ್ಷಿಸಲು ನಿರ್ದೇಶಿಸಲಾಗಿದೆ.

ಈ ಕೆರೆಯು ಪೂರ್ವದಿಕ್ಕಿನಲ್ಲಿದೆ. ಕಲಕೇರಿಯು ಸೂತ್ತಲೂ ಬೆಟ್ಟಗುಡ್ಡಗಳಿಂದ ಆವರಿಸಿಕೊಂಡಿವೆ. ಮತ್ತು ಈ ಕೆರೆಯ ಮದ್ಯದಲ್ಲಿ ಪುಟ್ಟ ದ್ವೀಪದಂತೆ ಕಾಣುವ ಗಿಡಮರಗಳಿಂದ ಕುಡಿದ ಒಂದು ದಿಬ್ಬವಿದೆ ಈ ಕೆರೆಗೆ ಬೇಡ್ತಿ ನದಿಯಿಂದ ನೀರು ಬಂದು ಸಂಗ್ರಹವಾಗುತ್ತದೆ. ಇವುಗಳಲ್ಲಿರುವ ಕಾಲುವೆ ಮುಖಾಂತರ ಹೊಲಗಳಿಗೆ ನೀರು ಪೂರೈಸುವ ವ್ಯವಸ್ಥೆಯನ್ನು ಮಾಡಲಾಗಿದೆ. ಕೆರೆಯು ಪೂರ್ವ ದಿಕ್ಕಿಗೆ ಅಕ್ಕಮಹಾದೇವಿ ಗುಡಿ ಇರುವುದು, ಹಾಗೂ ಇಲ್ಲಿನ ಜನರು ಕೃಷಿಯನ್ನು ಅವಲಂಬಿಸಿದ್ದಾರೆ. ಈ ಕೆರೆಯು ಮಳೆಯಾಶ್ರಿತ ಕೆರೆಯಾಗಿದೆ. ಕೆರೆಯು ೧೨ ಎಕರೆ ವಿಸ್ತಾರವನ್ನು ಹೊಂದಿದೆ. ಏರಿಯ ಉದ್ದ ೫೦೦ಮೀ. ಇದ್ದು, ಕೆರೆಯ ಆಯಕಟ್ಟಿನ ಪ್ರದೇಶಕ್ಕೆ ನೀರನ್ನು ಬಿಡಲಾಗುತ್ತದೆ.

**೫. ಸೋಮನಕೊಪ್ಪ ತೋಪಿನಕೆರೆ :**

ಸೋಮನಕೊಪ್ಪವು ಕಲಘಟಗಿಯಿಂದ ಪೂರ್ವಕ್ಕೆ ಏಳು ಕಿ. ಮೀ. ಅಂತರದಲ್ಲಿದೆ. ಸ್ಥಳೀಯ ಕೆರೆಯ ಹತ್ತಿರ ಕ್ರಿ.ಶ.ಸುಮಾರು ೧೨ನೆಯ ಶತಮಾನದ ತೀರ್ಥಂಕರರ ತೃಟಿತವಾದ ಶಿಲ್ಪಗಳಿವೆ. ಇದರಿಂದ ಈ ಪ್ರದೇಶದಲ್ಲಿ ಕ್ರಿ.ಶ.ಸುಮಾರು ೧೨ನೆಯ ಶತಮಾನದಲ್ಲಿ ಬಸದಿಯಿತ್ತೆಂದು ಧೃಡಪಡುತ್ತದೆ. ಆ ಬಸದಿ ಯಾವದೋ ಕಾಲಘಟ್ಟದಲ್ಲಿ ಸಮೂಲವಾಗಿದೆ[೫].

ಈ ಕೆರೆಗೆ ತೋಪಿನ ಕೆರೆ ಎಂದು ಹೆಸರು ಬರಲು ಕಾರಣವೆಂದರೆ, ಕೆರೆಯ ಪಕ್ಕದಲ್ಲಿ ಕಿರೆಸೂರ ನಿಂಗಪ್ಪ ಎಂಬುವರ ಹೊಲದಲ್ಲಿ ತೋಪಿನ ಬಸವಣ್ಣನ ಮೂರ್ತಿ ಮೂರ್ತಿ ಇರುವುದರಿಂದ ಕೆರೆಗೆ ತೋಪಿನಕೆರೆ ಎಂದು ಹೆಸರು ಬಂದಿದೆ. ಕೆರೆಯು ೮ ಎಕರೆ ವಿಸ್ತಾರವನ್ನು ಹೊಂದಿದೆ. ಕೆರೆಯ ಏರಿಯು ೫೦೦ ಮೀನಷ್ಟು ಉದ್ದವಿದೆ. ಈ ಕೆರೆಯಲ್ಲಿ ಎರಡು ಕೋಡಿ ಮತ್ತು ಎರಡು ಕಾಲುವೆಗಳು ಇವೆ. ಶಿವನಾಪುರದ ಉತ್ತರಾಭಿಮುಖವಾಗಿ ೨.ಕಿ.ಮೀ. ಈ ಪ್ರದೇಶವು ಕಪ್ಪು ಮಣ್ಣಿನಿಂದ ಕೂಡಿದ್ದು, ಇದು ಅರೆಮಲೆನಾಡು ಪ್ರದೇಶವಾಗಿದೆ. ತೋಪಿನ ಕೆರೆಗೆ ಉತ್ತರ ಮತ್ತು ದಕ್ಷಿಣ ದಿಕ್ಕಿನಿಂದ ನೀರು ಕಾಲುವೆ ಮುಖಾಂತರ ಕೆರೆಗೆ ಬಂದು ಸಂಗ್ರಹವಾಗುತ್ತದೆ. ಈ ಕೆರೆಯ ನೀರಿನಿಂದ ಸುಮಾರು ೧೬ ಹೆಕ್ಟೇರ್ ಪ್ರದೇಶಕ್ಕೆ ನೀರನ್ನು ಜನರು ಕೃಷಿಗೆ ಉಪಯೋಗಿಸಿಕೊಳ್ಳುತ್ತಾರೆ. ಈ ಕೆರೆಯ ಸುತ್ತಲು ಬೆಟ್ಟ–ಗುಡ್ಡಗಳಿಂದ ಆವರಿಸಿಕೊಂಡಿದೆ. ಈ ಕೆರೆಗೆ ಹೊಂದಿಕೊಂಡಂತೆ ಎರಡು ತೂಬು ಮತ್ತು ಎರಡು ಕೋಡಿಗಳನ್ನು ನಿರ್ಮಾಣ ಮಾಡಿದ್ದಾರೆ. ಈ ಕೆರೆಯ ಮೇಲೆ ಸಿಕ್ಕಿರುವ ಶಾಸನದ ಆಧಾರದಿಂದ ಇದು ಕಲ್ಯಾಣ ಚಾಲುಕ್ಯರ ಕಾಲದ ಕೆರೆ ಎಂದು ಹೇಳಬಹುದು.

**೬. ಕಲಘಟಗಿ ರುಸ್ತುಂಕೆರೆ**

ತಾಲೂಕು ಕೇಂದ್ರವಾಗಿರುವ ಕಲಘಟಗಿ ಧಾರವಾಡದಿಂದ ದಕ್ಷಿಣಕ್ಕೆ ಮೂವತ್ತೇಳು ಕಿ.ಮೀ.ಅಂತರದಲ್ಲಿದೆ. ಕ್ರಿ.ಶ.ಸುಮಾರು ಹನ್ನೆರಡು–ಹದಿಮೂರನೆಯ ಶತಮಾನದ ಕೆಲವು ಶಾಸನಗಳಲ್ಲಿ 'ಕಲ್ಲುಕುಟಿಗೆ' ಎಂದು ಉಲ್ಲೇಖಿತವಾಗಿದೆ[೬]. ಇದು ಪಲಸಿಗೆ ಪನ್ನಿಚ್ಛಾಸಿರ ಆಡಳಿತ ವಿಭಾಗದಲ್ಲಿ ಸೇರ್ಪಡೆಯಾಗಿತ್ತು. ಕಲ್ಯಾಣ ಚಾಲುಕ್ಯರ ಅಧೀನದಲ್ಲಿ ಆಳ್ವಿಕೆ ಕೈಗೊಂಡಿದ್ದ ಗೋವೆ ಕದಂಬರ ಕಾಲಾವಧಿಯಲ್ಲಿ ಪ್ರಸಿದ್ದ ಅಗ್ರಹಾರವಾಗಿತ್ತು. ಪರಿಸರದಲ್ಲಿ ಇಂದಿನ ರುಸ್ತುಂಕೆರೆಯು ಮೊದಲು ಮೃತ್ಯುಂಜಯ ಎಂಬ ಮಠವಿದ್ದು, ಕೆರೆಯನ್ನು ಸಹ ಅದೇ ಹೆಸರಿನಿಂದ ಕರೆಯುತ್ತಿದ್ದರು. ನಂತರ ಮುಸ್ಲಿಂರು ಇದನ್ನು ಕಬರಸ್ಥಾನದ ಅಕ್ರಮಗೊಂಡು ಇದು ಮೃತ್ಯುಂಜಯ ಮಠ ಇದ್ದದ್ದು ನಂತರ ರುಸ್ತುಂಕೆರೆಯಾಗಿ ಪರಿವರ್ತನೆಯಾಯಿತು. ಕೆರೆಯು ಕೇವಲ ನಾಲ್ಕು ಎಕರೆ ಪ್ರದೇಶ ಇದೆ ಎಂದು ಕ್ಷೇತ್ರಾಧ್ಯಯನದಿಂದ ಸಂದರ್ಭದಲ್ಲಿ ತಿಳಿದುಬಂದಿದೆ. ಇದನ್ನು ಕೆಲವು ಸಂಘಟನೆಗಳ ಯುವಕರು ಕೆರೆಯ ಹೂಳನ್ನು ನಾಲ್ಕು ಲಕ್ಷರೂ ವೆಚ್ಚದಲ್ಲಿ ತಮ್ಮ ಸ್ವಂತ ಹಣದಿಂದ ತೆಗೆಸಿದರು ಎಂದು ಹೇಳಲಾಗಿದೆ. ಕೆರೆಯ ಪಕ್ಕದಲ್ಲಿ ಗ್ರಾಮದೇವತೆಯ ದೇವಾಲಯ, ದತ್ತಾತ್ರೆಯ ಹಾಗೂ ಒಂದು ವೀರಗಲ್ಲು ಕಂಡುಬಂದಿದೆ. ಕೆರೆಯಲ್ಲಿ ಯಾವುದೇ ರೀತಿಯ ತೂಬು, ಕಾಲುವೆ, ಕೋಡಿ ಕಂಡುಬರುವುದಿಲ್ಲ. ಕೆರೆಯ ಏರಿಯ ಉದ್ದ ೫೦೦ ಮೀಟರ್ ಕೆರೆಯ ಏರಿಯ ಅಗಲ ೧೦ ಅಡಿ ಇದೆ. ಕೆರೆಯ ನೀರಿನ ಸಾಮರ್ಥ್ಯ ಏಳರಿಂದ ಎಂಟು ಪುಟ ಇದೆ. ಇದರ ಸುತ್ತಲೂ ತಂತಿಯ ಬೆಲಿಯನ್ನು ಹಾಕಿದ್ದಾರೆ. ಪ್ರಾಚೀನ ಕಾಲದ ಒಂದು ಬೇವಿನ ಮರ ಸಹ ಈ ಸ್ಥಳದಲ್ಲಿ ಕಂಡುಬಂದಿದೆ ಎಂದು ಹೇಳಲಾಗಿದೆ.

**೭. ತಂಬೂರು ದೊಡ್ಡಕೆರೆ**

ತಂಬೂರವು ಕಲಘಟಗಿಯಿಂದ ನೈಋತ್ಯಕ್ಕೆ ಹತ್ತು ಕಿ. ಮೀ. ಅಂತರವಿದೆ. ಸ್ಥಳೀಯ ಮತ್ತು ಇತರೆಡೆಯ ಕೆಲವು ಶಾಸನಗಳಲ್ಲಿ 'ತಮ್ಮಊರು', 'ತಮ್ಮಿಊರು', 'ತಮ್ಮಿಯೂರು', 'ತಾಂಬ್ರಪುರ', 'ತಾಂಬ್ರಾಪುರ', 'ತಾಮ್ರಪುರ', ಎಂದೆಲ್ಲಾ ಉಲ್ಲೇಖವಾಗಿದೆ. ಇದು ತಮ್ಮಿಯ+ಊರು> ತಮ್ಮಿಯೂರು> ತಂಬಿಯೂರು> ತಂಬೂರು ಎಂದು ರೂಪಾಂತರವಾಗುತ್ತ ಬಂದಿದೆ. ತಮ್ಮಿ, ತಂಬಿ ಎಂದರೆ ತಮ್ಮ ಎಂದರ್ಥ. ಪ್ರಾಯಶಃ ತಮ್ಮಣ್ಣ, ತಮ್ಮಿಯಣ್ಣ, ತಂಬಿಯಣ್ಣ ಎಂಬಾತ ವ್ಯಕ್ತಿಯಿಂದಾಗಿ ತಮ್ಮಿಯೂರು ಎಂಬ ಹೆಸರು ಈ ಗ್ರಾಮಕ್ಕೆ ಬಂದಿರುವಂತೆ ತೋರುತ್ತದೆ. ಸ್ಥಳೀಯ ಕ್ರಿ.ಶ. ೧೧೨೫ ರ ಜೈನ ಶಾಸನ[೭] ವು ಎಂದು ಗ್ರಾಮದ ಭೌಗೋಳಿಕ ಮತ್ತು ಪ್ರಾಕೃತಿಕ ಸೌಂದರ್ಯವನ್ನು ವರ್ಣಿಸಿದೆ. ಗ್ರಾಮದ ಚರಿತ್ರೆ ಮಳಖೇಡದ ರಾಷ್ಟ್ರಕೂಟರ ಕಾಲದಿಂದ ಪ್ರಾರಂಭವಾಗುತ್ತದೆ. ಇದು ಹಲಸಿಗೆ ಪನ್ನಿಚ್ಛಾಸಿರ ಆಡಳಿತ ವಿಭಾಗದ ಮಾವಳೆ ಐನೂರದ

ತಮ್ಮಿಯೂರು ಪನ್ನೆರಡು ಕಂಪಣದ ಮುಖ್ಯ ಆಡಳಿತ ಕೇಂದ್ರವಾಗಿತ್ತು. ಅಂದು ಸಾವಿರ ಮಹಾಜನರ ಪ್ರಸಿದ್ಧ ಅಗ್ರಹಾರವಾಗಿತ್ತು. ಗೋವೆಯ ಕಾದಂಬರ ಆಳ್ವಿಕೆಯ ಕಾಲದಲ್ಲಿ ಪ್ರಮುಖ ಜೈನ ಕೇಂದ್ರವಾಗಿತ್ತು.

ಸ್ಥಳೀಯ ಕೋಟೆಯ ಆವರಣದಲ್ಲಿರುವ ಕಲ್ಯಾಣ ಚಾಲುಕ್ಯರ ೬ನೆಯ ವಿಕ್ರಮಾದಿತ್ಯ ಮಹಾಮಂಡಳೇಶ್ವರರಾದ ಗೋವೆ ಕದಂಬರ ಇಮ್ಮಡಿ ಜಯಕೇಶಿಯ ಹಿರಿಯ ಸಹೋದರಿ ಪದ್ಮಲದೇವಿಯ ಪತಿ ಮಹಾಮಂಡಳೇಶ್ವರ ಹಾಕಿಬಲ್ಲದೇವನ (ಹಾನಗಲ್ಲ ಕದಂಬರ ಮಲ್ಲಿಕಾರ್ಜುನ?) ಸಚಿವೋತ್ತಮರಾದ ಬರ್ಮ್ಮಚಯ್ಯ ಮತ್ತು ರಾಚಮಲ್ಲರು, ಬರ್ಮ್ಮಚಯ್ಯನ ತಂದೆ ಬಲ್ಲಿರಾಜ, ತಾಯಿ ಮಾಳಿಯಕ್ಕ, ಗುರು ಗೋಪನಂದಿ, ಧರ್ಮಪತ್ನಿ ಭಾಗವ್ವೆ ಮತ್ತು ಪುತ್ರ ಶಾಂತಿವರ್ಮ ನಿಷ್ಠಾವಂತ ಜಿನಭಕ್ತರಾಗಿದ್ದರು. ಹಾಕಿಬಲ್ಲದೇವನ ತನ್ನ ತಂದೆ ಮಾವುಲಿದೇವನ ಪುಣ್ಯಾರ್ಥವಾಗಿ ಇಮ್ಮಡಿ ಜಯಕೇಶಿ ಆಳ್ವಿಕೆ ಕೈಗೊಂಡಿದ್ದ ಪಲಸಿಗೆ ಪನ್ನಿರ್ಚ್ಛಾಸಿರದ ಮಾವಳೆ ಐನೂರದ ಕಂಪಣದ ತಂಬೂರುದಲ್ಲಿ ನಿವೇಶವನ್ನು ಪಡೆದು, ತನ್ನ ಸಚಿವರಾದ ಬರ್ಮ್ಮಚಯ್ಯ ಮತ್ತು ರಾಚಮಲ್ಲರಿಗೆ ಒಪ್ಪಿಸುತ್ತಾನೆ. ಇವರು ಈ ನಿವೇಶನದಲ್ಲಿ ಬಸದಿಯನ್ನು ನಿರ್ಮಿಸಿ ಮೂಲಸಂಘದ ಸೂರಸ್ತಗನ ಪರಂಪರೆಯ ಮೇಘಚಂದ್ರಪಂಡಿತದೇವನ ಪಾದಗಳನ್ನು ತೊಳೆದು, ಆ ಪ್ರಕ್ಷಾಳನ್ನು ಜಯಕೇಶಿ ಮತ್ತು ಮಾದಿರಾಜನಿಗೆ ಕೊಟ್ಟು ಅವರಿಂದ ಬಸದಿಯ ವಿವಿಧ ಧಾರ್ಮಿಕ ಚಟುವಟಿಕೆಗಳಿಗೆ ಮತ್ತು ಮುನಿಗಳ ಆಹಾರಕ್ಕೆ ಎರಡು ಮತ್ತರು ಗದ್ದೆ (ನೀರಾವರಿ ಭೂಮಿ, ಭತ್ತ ಬೆಳೆಯುವ ಭೂಮಿ, ನದೀಮಾತೃಕ), ಎರಡು ಮತ್ತರು ಹಕ್ಕಲು (ಹೊಲ) ಮತ್ತು ಕೆಲವು ಭೂಮಿಯನ್ನು ದಾನ ಪಡೆದರು.

ತಂಬೂರಲ್ಲಿ ಎರಡು ಕೆರೆಗಳು ಕಂಡುಬಂದಿದ್ದು ಒಂದು ಉತ್ತರಕುಮಾರ ಕೆರೆ ಈ ಕೆರೆಗೆ ಹೀಗೆ ಹೆಸರು ಬರಲು ಕಾರಣ ಆ ಊರಿನಲ್ಲಿ ಉತ್ತರಕುಮಾರ ದೇವಾಲಯ ಇದ್ದು, ಅದು ಕೆರೆಯ ಹತ್ತಿರ ಇದ್ದುದ್ದರಿಂದ ಈ ಕೆರೆಗೆ ಉತ್ತರಕುಮಾರಕೆರೆ ಎಂದು ಕರೆಯುತ್ತಾರೆ. ಊರಿನ ಗ್ರಾಮಸ್ಥರು ಅದನ್ನು ಒಡಕಿ ಕೆರೆ ಎಂತಲೂ ಕರೆಯುತ್ತಾರೆ. ಕೆರೆಗೆ ನೀರು ಕಾಲುವೆ ಮುಖಾಂತರ ಬಂದು ಸೇರುತ್ತದೆ, ಕೆರೆಯು ಊರಿನ ಜನರ ಜೀವಾಳವಿದ್ದಂತೆ. ಕೆರೆಯ ನೀರನ್ನು ಜನರು ಕೃಷಿಗೆ ಬಳಸಿಕೊಳ್ಳುತ್ತಾರೆ. ಈ ಕೆರೆಗೆ ಅಡ್ಡಲಾಗಿ ಒಂದು ಸಣ್ಣ ಬ್ರೀಜ್‌ನ್ನು ಕಟ್ಟಲಾಗಿದೆ. ಅದೇ ರೀತಿ ಇನ್ನೊಂದು ದೊಡ್ಡಕೆರೆ ಸುಮಾರು ೨೪ ಹೆಕ್ಟರ್ ಪ್ರದೇಶವನ್ನು ಹೊಂದಿದೆ. ಈ ಕೆರೆಗೆ ನೀರು ದಕ್ಷಿಣ ದಿಕ್ಕಿನಿಂದ ಮಳೆನೀರು ಕಾಲುವೆ ಮುಖಾಂತರ ಬಂದು ಸಂಗ್ರಹಣೆಯಾಗುತ್ತದೆ. ಕೆರೆಯ ಸುತ್ತಲು ಹಚ್ಚಾದ ಹಸಿರಿನ ಕಾಡುಗಳಿಂದ ಆವರಿಸಿಕೊಂಡಿದೆ ಇಲ್ಲಿನ ಜನರು ಕೃಷಿಯನ್ನು ಅವಲಂಬಿಸಿದ್ದಾರೆ. ಅದೇ ರೀತಿ ಇಲ್ಲಿ ಪ್ರಾಚೀನಕಾಲದ ಒಂದು ಬಾವಿಯಿರುವುದು ಕಂಡುಬಂದಿದೆ.

ತಂಬೂರಿನ ಪಕ್ಕದ ಊರಾದ ದೇವಿಕೋಪ್ಪವು ತಂಬೂರಿನಿಂದ ೨.ಕಿ.ಮೀ ಅಂತರದಲ್ಲಿದೆ. ಕೆರೆಯ ಏರಿಯ ೭೦೦ ಮೀ. ಉದ್ದವಿದ್ದು, ಅದರ ಅಗಲ ೧೧ ಅಡಿ ಇದ್ದು ಕೆರೆ ಏರಿಯ ಮೇಲ ಎತ್ತಿನ ಬಂಡೆಯು ಓಡಾಡಲು ಜಾಗವು ಸಹ ಇದೆ. ಈ ಕೆರೆಯು ಒಂದು ಕಾಲುವೆಯನ್ನು ಹೊಂದಿದ್ದು, ಈ ಕೆರೆಯ ಏರಿಯ ಹೊರಭಾಗವನ್ನು ಮಣ್ಣಿನಿಂದ ಮತ್ತು ಒಳಭಾಗವನ್ನು ಕಲ್ಲಿನಿಂದ ನಿರ್ಮಿಸಿದ್ದಾರೆ. ಇದರ ನೀರಿನ ಪ್ರಮಾಣ ಏಳರಿಂದ ಎಂಟು ಅಡಿ ಆಳ ನೀರನ್ನು ಈ ಕೆರೆಯು ಹೊಂದಿದೆ. ಇಲ್ಲಿ ನಿರ್ಮಾಣ ಮಾಡಿರುವ ತೂಬುಗಳು ಕೆರೆಗೆ ಹೊಂದಿಕೊಂಡಂತಿವೆ. ಅದೇ ರೀತಿ ಕೆರೆಯಲ್ಲಿ ಎರಡು ಕಾಲುವೆಗಳು ಸಹ ಇರುವುದು ಕಂಡುಬಂದಿವೆ.

**೮. ದೇವಿಕೋಪ್ಪ ಹೀರೆಕೆರೆ**

ದೇವಿಕೋಪ್ಪವು ಕಲಘಟಗಿಯಿಂದ ನೈರುತ್ಯಕ್ಕೆ ಏಳು ಕಿ.ಮೀ ಅಂತರದಲ್ಲಿದೆ. ಈ ಗ್ರಾಮದಿಂದ ಪಶ್ಚಿಮಕ್ಕೆ ಎರಡು ಕಿ.ಮೀ ಅಂರದಲ್ಲಿರುವ ಲಂಬಾಣಿ ತಾಂಡೆಯ ಪಶ್ಚಿಮಕ್ಕೆ ಅರಣ್ಯದಲ್ಲಿ ೨೦೦೦ರ ಅಕ್ಟೋಬರ್ ೧೦ ರಂದು ಯಾವುದೋ ಕಾರ್ಯಕ್ಕೆ ಅಗೆಯುತ್ತಿದ್ದ ಸಂದರ್ಭದಲ್ಲಿ ಜಿನಶಾಸನ[೮] ಸ್ತಂಭ ಬೆಳಕಿಗೆ ಬಂದಿದೆ.

ದೇವಿಕೊಪ್ಪ ಹೀರೆಕೆರೆ ಕಲಘಟಗಿ ಪರಿಸರದ ಕೆರೆಗಳಲ್ಲಿ ಒಂದಾಗಿದೆ. ಹೀರೆಕೆರೆ ಎಂದೂ ಹೆಸರು ಬರಲು ಕಾರಣವೆನೆಂದರೆ ಇದು ಪ್ರಾಚೀನ ಕೆರೆಗಳಲ್ಲಿ ಒಂದಾಗಿದ್ದು, ಈ ಕೆರೆಯು ಸುಮಾರು ೪೩೩ ಎಕರೆ ಪ್ರದೇಶವನ್ನು ಹೊಂದಿದ್ದು ಆದ್ದರಿಂದ ಈ ಕೆರೆಗೆ ಹೀರೆಕೆರೆ ಎಂದು ಹೆಸರು ಬಂತು ಎಂದು ಸ್ಥಳೀಯರಿಂದ ಮತ್ತು ನೀರಾವರಿ ಇಲಾಖೆಯಿಂದ ಬಂದ ಮಾಹಿತಿಯಾಗಿದೆ. ಕೆರೆಯನ್ನು ಯಾರು ಕಟ್ಟಿಸಿದರೆಂಬುದರ ಬಗ್ಗೆ ಮಾಹಿತಿ ದೊರೆತಿಲ್ಲ. ಕೆರೆಯ ರಚನೆಯನ್ನು ನೋಡಿದಾಗ ಇದನ್ನು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಇದು ರಚನೆಯಾಗಿದೆ ಎಂದು ಹೇಳಬಹುದು. ಗ್ರಾಮದ ಪೂರ್ವಾಭಿಮುಖವಾಗಿ ಕೆರೆಯಿದೆ. ಕೆರೆಯ ಏರಿಯು ದಕ್ಷಿಣಾಭಿಮುಖವಾಗಿದೆ. ಕೆರೆಯ ಏರಿಯು ನೇರವಾಗಿದ್ದು ಕೊನೆಯ ಭಾಗದಲ್ಲಿ ವೃತ್ತಾಕಾರದಲ್ಲಿದೆ. ಏರಿಯ ಒಳ ಮತ್ತು ಹೊರ ಪಾರ್ಶ್ವವನ್ನು ಮಣ್ಣಿನಿಂದ ನಿರ್ಮಿಸಿದ್ದಾರೆ. ಎತ್ತರ ಕಟ್ಟಡದ ತೂಬು ಇದೆ ಕೆರೆಯ ಬಲಭಾಗದಲ್ಲಿ ಪ್ರಾಚೀನ ಕಾಲದ ರಾಮಲಿಂಗೇಶ್ವರ ದೇವಾಲಯವಿದೆ. ಅದಕ್ಕೆ ಹೊಂದಿಕೊಂಡು ಎಡ ಭಾಗಕ್ಕೆ ಗಂಗಾದೇವಿ ಮತ್ತು ಬಲಕ್ಕೆ ಗಣಪತಿಗುಡಿ ಇದೆ ಇದರ ಮದ್ಯದಲ್ಲಿ ನಂದಿ ಮೂರ್ತಿಯು ಸಹ ಇದೆ. ದೇವಾಸ್ಥನದ ಎದುರುಗಡೆ ಪ್ರಾಚೀನ ಕಾಲದ ಬಾವಿ ಇದ್ದದ್ದು ಕಂಡು ಬಂದಿದೆ. ದೇವಿಕೊಪ್ಪದ ಜನರು ಕೃಷಿಯನ್ನು ಅವಂಬಿಸಿದ್ದಾರೆ ಜನರು ಕೆರೆಯ ನೀರನ್ನು ತಮ್ಮ ಹೊಲಗಳಿಗೆ ಬೇಸಾಯ ಮಾಡಲು ಬಳಸಿಕೊಳ್ಳುತ್ತಾರೆ. ಇದು ಸುತ್ತಲೂ ಕಾಡಿನಿಂದ ಆವರಿಸಿಕೊಂಡ ಸುಂದರವಾದ ಪ್ರದೇಶವಾಗಿದೆ. ಈ ಕೆರೆಯ ತೂಬಿಗೆ ಕಬ್ಬಿಣದ ಬಾಗಿಲುಗಳು

ಇರುವುದು ವಿಶೇಷ. ಕೆರೆಗೆ ಅಡ್ಡಲಾಗಿ ಒಂದು ಕೋಡಿಯನ್ನು ಸಹ ನಿರ್ಮಿಸಿದ್ದಾರೆ. ಇಲ್ಲಿ ಕಲ್ಯಾಣ ಚಾಲುಕ್ಯರ ಕಾಲದ ರಾಮಲಿಂಗೇಶ್ವರ ದೇವಾಲಯ ಇರುವುದರಿಂದ ಇದು ೧೨ನೇ ಶತಮಾನದಲ್ಲಿ ನಿರ್ಮಾಣವಾಗಿರಬಹುದು ಎಂದು ಹೇಳಲಾಗಿದೆ.

**೯. ಹಿರೆಹೊನ್ನಳ್ಳಿ ಹಿರೆಕೆರೆ :**

ಹಿರೆಹೊನ್ನಳ್ಳಿ ಕೆರೆಯು ಕಲಘಟಗಿ ಪರಿಸರದಲ್ಲಿ ಒಂದಾಗಿದೆ. ಈ ಕೆರೆಯು ತಾಲೂಕಿನಿಂದ ೧೩ ಕಿ.ಮೀ ಅಂತರದಲ್ಲಿದೆ. ಈ ಕೆರೆಯನ್ನು ಯಾರು ಕಟ್ಟಿಸಿದರೆಂಬುದರ ಬಗ್ಗೆ ಯಾವುದೇ ಉಲ್ಲೇಖ ದೊರೆತಿರುವುದಿಲ್ಲ. ಕೆರೆಯ ರಚನೆಯನ್ನು ನೋಡಿದಾಗ ಇತ್ತೀಚಿನ ಅಂದರೆ ಬ್ರಿಟೀಷರ ಕಾಲದಲ್ಲಿ ಈ ಕೆರೆಯು ನಿರ್ಮಾಣವಾಗಿದೆ ಎಂದು ಸ್ಥಳೀಯ ಜನರ ಅಭಿಪ್ರಾಯವಾಗಿದೆ. ಕೆರೆಯು ಗ್ರಾಮದ ಪಶ್ಚಿಮ ದಿಕ್ಕಿಗೆ ಇದ್ದು, ಕೆರೆಯ ಏರಿಯು ಉತ್ತರ ಮತ್ತು ದಕ್ಷಿಣಾಭಿಮುಖವಾಗಿದೆ. ಕೆರೆಯ ಏರಿಯು ನೇರವಾಗಿದೆ. ಏರಿಯ ಒಳಭಾಗ ದಪ್ಪ ಕಲ್ಲುಗಳಿಂದ ಜೋಡಿಸಿ ಕಲ್ಲು ಕಟ್ಟಡದಂತೆ ನಿರ್ಮಿಸಿದ್ದಾರೆ, ಹೊರಭಾಗವನ್ನು ಮಣ್ಣಿನಿಂದ ನಿರ್ಮಿಸಿದ್ದಾರೆ. ಉತ್ತರ ದಿಕ್ಕಿನಲ್ಲಿರುವ ಕೋಡಿಯ ಹತ್ತಿರ ದಾರಿ ಕರಿಯಮ್ಮನ ಮೂರ್ತಿ ಮತ್ತು ಇತರ ಮೂರ್ತಿಗಳು ದೊರಕಿವೆ. ಕೆರೆಯ ನೀರನ್ನು ಕಾಲುವೆ ಮುಂಖಾಂತರ ತಮ್ಮ ಹೊಲಗಳಿಗೆ ಉಪಯೋಗಿಸಿಕೊಳ್ಳುತ್ತಾರೆ. ಇಲ್ಲಿಯ ಜನರು ಕೃಷಿಯನ್ನು ಅವಂಬಿಸಿದ್ದಾರೆ. ಊರಿನ ದಕ್ಷಿಣ ದಿಕ್ಕಿಗೆ ದೂಳಿಕೊಪ್ಪ ೨ ಕಿ.ಮೀ ಅಂತರದಲ್ಲಿದೆ ಹಾಗೂ ದುಮ್ಮವಾಡ ೬ ಕಿ.ಮೀ ಅಂತರದಲ್ಲಿದೆ. ಕೆರೆಯು ಹಿರೆಹೊನ್ನಳ್ಳಿ ಗ್ರಾಮದ ಜನರ ಜೀವನಾಂಶವಾಗಿದೆ. ಈ ಹೊನ್ನಳ್ಳಿ ಗ್ರಾಮದ ಕೆರೆಯ ಕಾಮಗಾರಿ ಪ್ರಸ್ತುತವಾಗಿ ನಡೆಯುತ್ತಿದೆ ಹಾಗೂ ಹೂಳೆತ್ತುವ ಕಾರ್ಯವನ್ನು ಸರಕಾರ ನಡೆಸುತ್ತಿದೆ. ಊರಿನ ಜನಸಂಖ್ಯೆ ೩೦೦೦ ಇದೆ ಎಂದು ಪಂಚಾಯಿತಿ ವರದಿ ಪ್ರಕಾರ ತಿಳಿದುಬಂದಿದೆ. ಹಿರೆಹೊನ್ನಳ್ಳಿಯ ಹಿರೆಕೆರೆಗೆ ಸಂಬಂಧಿಸಿದಂತೆ ಎರಡು ಕಾಲುವೆಗಳಿದ್ದು ಅದರಿಂದ ಮಳೆಯ ನೀರು ನೇರವಾಗಿ ಕೆರೆಗೆ ಬಂದು ಸಂಗ್ರಹವಾಗುತ್ತದೆ. ಈ ಕೆರೆಯಲ್ಲಿಯು ಒಂದು ತೂಬು ಇರುವುದು ಕಂಡುಬಂದಿದೆ. ಕೆರೆಗೆ ಅಡ್ಡಲಾಗಿ ಒಂದು ಕೋಡಿಯನ್ನು ನಿರ್ಮಿಸಿದ್ದಾರೆ. ಈ ಕೆರೆಯನ್ನು ಬ್ರಿಟಿಷರು ತಮ್ಮ ಆಡಳಿತ ಅವಧಿಯಲ್ಲಿ ನಿರ್ಮಿಸಿದ್ದಾರೆ ಎಂದು ಸ್ಥಳೀಯರಿಂದ ಬಂದ ಮಾಹಿತಿಯಾಗಿದೆ ಮತ್ತು ಇದು ಆಧುನಿಕ ಕೆರೆ ಎಂದು ಹೇಳಲಾಗಿದೆ.

**೧೦. ಕಾಮಧೇನು ಹಿರೆಕೆರೆ**

ಕಲಘಟಗಿ ತಾಲೂಕಿನ ಕಾಮಧೇನು ಗ್ರಾಮವು (ಜನಸಂಖ್ಯೆ ೨೧೦೦) ಕಲಘಟಗಿಯಿಂದ ಈಶ್ಯಾನಕ್ಕೆ ೧೦ ಕಿ.ಮೀ ಅಂತರದಲ್ಲಿದೆ. ಪ್ರಾಚೀನ ಶಾಸನಗಳಲ್ಲಿ 'ಸಾಸಲು' ಎಂದೇ

ಉಲ್ಲೇಖಿತಗೊಂಡಿರುವ ಈ ಊರಿಗೆ ಕಾಮಧೇನು ಎಂಬ ಹೆಸರು ಹೇಗೆ ಬಂತೆಂದು ವಿವರಿಸುವಲ್ಲಿ ದಾಖಲೆಗಳು ಲಭ್ಯವಿಲ್ಲ. ಸ್ಥಳೀಕರು ಇದಕ್ಕೆ ಪೌರಾಣಿಕ ಹಿನ್ನಲೆಯನ್ನು ನೀಡುತ್ತರಾದರೂ ಸಮರ್ಪಕವೆನಿಸುವುದಿಲ್ಲ. ಈ ಊರಿನಲ್ಲಿನ ಮೂರು ಶಾಸನಗಳು ಊರ ದಕ್ಷಿಣದಲ್ಲಿರುವ ಕಲ್ಮೇಶ್ವರ ದೇವಾಲಯದ ಆವರಣದಲ್ಲಿಯೇ ಇವೆ. ಇವುಗಳಲ್ಲಿ ೩ನೆಯ ಸೋಮೇಶ್ವರನ ಕಾಲಕ್ಕೆ ಸೇರಿದ ಗೋವೆ ಕದಂಬ ಅರಸನ ಕ್ರಿ.ಶ. ೧೧೨೯ರ ಶಾಸನ ಹಲಸಿಗೆ ನಾಡಿನ ಸಾಸಲು ಗ್ರಾಮದ ಸೌಂದರ್ಯ ಸಮೃದ್ಧಿಯನ್ನು ವರ್ಣಿಸುತ್ತ. ಸಾಸಲು ತೆಂಕಣದಲ್ಲಿ ಬಂದು ನೆಲಸಿದ ಕಲಿದೇವನ ಸ್ವಯಂಭು ಶ್ರೀ ಕಲಿದೇವ ಸ್ವಾಮಿ ಗುಡಿ ಹಾಗೂ ಹುಲಿವರದ ಮಲ್ಲಿಶೆಟ್ಟಿಯು ಭೂಮಿಯನ್ನು ಮತ್ತು ಹಣವನ್ನು ದಾನ ಮಾಡಿದ ವಿಷಯವನ್ನು ತಿಳಿಸುತ್ತದೆ.

ಕಾಮಧೇನುವಿನ ಹಿರೇಕೆರೆಯು ಕಲಘಟಗಿ ಪರಿಸರದ ಕೆರೆಗಳಲ್ಲಿ ಒಂದಾಗಿದೆ. ಹೀರೆಕೆರೆ ಎಂದು ಹೆಸರು ಬರಲು ಕಾರಣವೆನೆಂದರೆ ಈ ಕೆರೆಯು ದೊಡ್ಡದಾಗಿದ್ದರಿಂದ ಇದಕ್ಕೆ ಹೀರೆ ಕೆರೆ ಎಂದು ಕರೆಯುತ್ತಾರೆ. ಈ ಕೆರೆಯು ೧೧೭೧ರಲ್ಲಿ ನಿರ್ಮಾಣವಾಗಿರಬಹುದು ಎಂದು ಹೇಳಲಾಗಿದೆ. ಕೆರೆಯ ಆಕಾರವನ್ನು ನೋಡಿದಾಗ ಇದು ಆಧುನಿಕ ಕಾಲದ ಕೆರೆಯಾಗಿದೆ. ಕೆರೆಯು ಪೂರ್ವಾಭಿಮುಖವಾಗಿದ್ದು, ಕೆರೆಯ ಏರಿಯು ನೇರವಾಗಿದ್ದು ಕೊನೆಯ ಭಾಗ ಡೊಂಕಾಗಿದೆ. ಏರಿಯ ಒಳಪಾರ್ಶ್ವವನ್ನು ಮತ್ತು ಹೊರಭಾಗವನ್ನು ಮಣ್ಣಿನಿಂದ ನಿರ್ಮಿಸಿದ್ದಾರೆ. ಕೆರೆಯ ಉತ್ತರ ಭಾಗಕ್ಕೆ ಕೆರೆಯ ಕೋಡಿಯ ನಿರ್ಮಾಣವಾಗಿದೆ. ಕೆರೆಯ ಪೂರ್ವ ಭಾಗದಲ್ಲಿ ಸಿದ್ಧಾರೂಢರ ದೇವಾಲಯವಿದೆ ಕೆರೆಗೆ ಉತ್ತರಾಭಿಮುಖವಾಗಿರುವ ಅರಣ್ಯ ಪ್ರದೇಶದಿಂದ ಮಳೆ ನೀರು ಹರಿದುಬಂದು ಸಂಗ್ರಹಣೆಯಾಗುತ್ತದೆ. ಕಾಮಧೇನುವಿನ ಗ್ರಾಮಸ್ಥರು ಕೆರೆಯ ನೀರನ್ನು ತಮ್ಮ ಹೊಲಗಳಿಗೆ ಉಪಯೋಗಿಸಿಕೊಳ್ಳುತ್ತಾರೆ. ಅದೇ ರೀತಿ ಕೆರೆಯ ಸುತ್ತಲೂ ಅರಣ್ಯ ಇರುವುದರಿಂದ ಈ ಪ್ರದೇಶ ಹಸಿರಾಗಿ ಕಾಣುತ್ತದೆ. ಕಾಮಧೇನು ಮಿಶ್ರಿಕೋಟೆಯಿಂದ ೩ ಕಿ.ಮೀ ಅಂತರದಲ್ಲಿದೆ. ಊರಿನ ಜನರು ಸಹ ಕೃಷಿಯನ್ನು ಅವಲಂಬಿಸಿದ್ದಾರೆ. ಕೆರೆಯ ಏರಿಯು ಒಂದು ಕಿ.ಮೀ ಉದ್ದವಿದೆ ಮತ್ತು ಅಗಲ ೩ ಮೀ ಅಗಲವಿದೆ. ಅದೇ ರೀತಿ ಒಂದು ತೂಬು ಹಾಗೂ ಕೆರೆಗೆ ಅಡ್ಡಲಾಗಿ ಎರಡು ಕೋಡಿಗಳನ್ನು ಸಹ ನಿರ್ಮಿಸಿದ್ದಾರೆ.

### ೧೧. ದುಮ್ಮವಾಡದ ಊರಮುಂದಿನಕೆರೆ

ದುಮ್ಮವಾಡ ಕೆರೆಯು ಕಲಘಟಗಿ ಪರಿಸರದಲ್ಲಿ ಒಂದಾಗಿದೆ. ತಾಲೂಕು ಕೇಂದ್ರವಾದ ಕಲಘಟಗಿ ಪ್ರದೇಶದಿಂದ ೭ ಕಿ.ಮೀ ಅಂತರದಲ್ಲಿದೆ. ಈ ಕೆರೆಗೆ ಊರಮುಂದಿನಕೆರೆ ಎಂದು ಹೆಸರು ಬರಲು ಕಾರಣ ಒಂದು ಊರಿನಲ್ಲಿ ಮೂರರಿಂದ ನಾಲ್ಕು ಕೆರೆಗಳು ಇರುತ್ತವೆ. ಅದಕ್ಕಾಗಿ ಒಂದೊಂದು ಕೆರೆಗೆ ಒಂದೊಂದು ಹೆಸರಿನಿಂದ ಕರೆಯುತ್ತಾರೆ ಆದ್ದರಿಂದ ಆದಕ್ಕೆ ಊರಮುಂದಿನ

ಕೆರೆ ಎಂದು ಹೆಸರು ಬಂದಿದೆ. ಅದೇ ರೀತಿ ಕೆರೆಯನ್ನು ಯಾರು ನಿರ್ಮಾಣ ಮಾಡಿದ್ದಾರೆ ಎಂಬುದರ ಬಗ್ಗೆ ಯಾವುದೇ ಮಾಹಿತಿ ದೊರತಿಲ್ಲ. ಕೆರೆಯು ಉತ್ತರಾಭಿಮುಖವಾಗಿದೆ. ಕೆರೆಯ ಏರಿಯು ಅಂಕು ಡೊಂಕಾಗಿದ್ದು ಕೊನೆಯಲ್ಲಿ ವೃತ್ತಾಕಾರವಾಗಿದೆ. ಕೆರೆಯ ಏರಿಯ ಒಳ ಭಾಗ ಮತ್ತು ಹೊರಭಾಗವನ್ನು ಮಣ್ಣಿನಿಂದ ನಿರ್ಮಾಣ ಮಾಡಿದ್ದಾರೆ. ಕೆರೆಯ ದಕ್ಷಿಣಕ್ಕೆ ಎರಡು ಕಟ್ಟೆಗಳ ನಿರ್ಮಾಣವಾಗಿವೆ ಕಟ್ಟೆಯ ಹತ್ತಿರ ಈಶ್ವರ ದೇವಾಲಯವಿದ್ದು, ಅದರ ಪಕ್ಕದಲ್ಲಿ ಒಂದು ವೀರಗಲ್ಲು ಸಹ ಇದೆ ದೇವಾಲಯದ ಎಡಭಾದಲ್ಲಿ ಗಣಪತಿ ಮೂರ್ತಿ, ನಾಗರ ಮೂರ್ತಿಯು ಇದೆ. ಗರ್ಭಗೃಹದಲ್ಲಿ ಲಿಂಗವಿದೆ ಎದುರಿಗೆ ನಂದಿ ಮೂರ್ತಿ ಇದೆ. ಕೆರೆಯ ದಕ್ಷಿಣಕ್ಕೆ ಮಾರುತಿ ದೇವಾಲಯವಿರುವುದು ಕಂಡು ಬಂದಿದೆ. ಕೆರೆಯ ನೀರನ್ನು ಜನರು ತಮ್ಮ ಬಳಕೆಗೆ ಮತ್ತು ಕೃಷಿಗೆ ಕಾಲುವೆ ಮುಖಾಂತರ ನೀರನ್ನು ತಮ್ಮ ಗದ್ದಗಳಿಗೆ ಬಳಸಿಕೊಳ್ಳುತ್ತಿದ್ದರು. ಅದೇ ರೀತಿ ನೀರಾವರಿ ಇಲಾಖೆಯವರು ಈ ಕೆರೆಯ ಕಾಮಗಾರಿಯನ್ನು ಮಾಡಿದ್ದಾರೆ. ದುಮ್ಮವಾಡದ ಜನರಿಗೆ ಕೆರೆಯು ಜೀವಾಳವಿದ್ದಂತೆ. ಏಕೆಂದರೆ ಈ ಊರಿನ ಜನರು ಕೃಷಿಯನ್ನು ಅವಲಂಬಿಸಿದ್ದಾರೆ. ಆದರೆ ಕೆರೆಯು ತುಂಬಿತೆಂದರೆ ಇದು ನರಬಲಿಯನ್ನು ಪಡೆಯುತ್ತದೆ ಎನ್ನುವುದು ಸ್ಥಳೀಯರ ನಂಬಿಕೆ ಈ ಕೆರೆಯು ಈಗಾಗಲೇ ಇಬ್ಬರನ್ನು ಬಲಿ ತೆಗೆದುಕೊಂಡಿದೆ ಎಂದು ಸ್ಥಳೀಯರಿಂದ ತಿಳಿದುಬಂದಿದೆ. ಕೆರೆಯಲ್ಲಿ ಒಂದು ಕೋಡಿ ಹಾಗೂ ಎರಡು ಕಟ್ಟೆಯನ್ನು ಕಟ್ಟಿದ್ದಾರೆ. ಇಲ್ಲಿ ಕಲ್ಯಾಣ ಚಾಲುಕ್ಯರ ಕಾಲದ ಕಲ್ಮೇಶ್ವರ ದೇವಾಲಯ ಇರುವುದರಿಂದ ಇದು ೧೩ನೇ ಶತಮಾನದಲ್ಲಿ ನಿರ್ಮಾಣವಾಗಿರಬಹುದು ಎಂದು ಹೇಳಲಾಗಿದೆ.

**೧೨. ಪರಸಾಪುರ ಚಿಕ್ಕಕೆರೆ** 

ಪರಸಾಪೂರ ಚಿಕ್ಕ ಕೆರೆಯು ಕಲಘಟಗಿ ಪರಿಸರದ ಕೆರೆಗಳಲ್ಲಿ ಒಂದಾಗಿದೆ. ತಬಕದ ಹೊನ್ನಳ್ಳಿಯಿಂದ ೬ ಕಿ.ಮೀ ಅಂತರದಲ್ಲಿದೆ. ಈ ಊರಿನಲ್ಲಿ ಎರಡು ಕೆರೆಗಳು ಕಂಡುಬಂದಿವೆ ಅದರಲ್ಲಿ ಈ ದೊಡ್ಡ ಕೆರೆಯು ಒಂದು. ಪರಸಾಪೂರದ ಎರಡು ಕೆರೆಗಳಲ್ಲಿ ದೊಡ್ಡ ಕೆರೆಯು ವಿಸ್ತೀರ್ಣದಲ್ಲಿ ಚಿಕ್ಕದಾಗಿದ್ದು ಹಾಗೇ ಚಿಕ್ಕಕೆರೆ ವಿಸ್ತೀರ್ಣದಲ್ಲಿ ದೊಡ್ಡದಾಗಿದೆ. ಚಿಕ್ಕಕೆರೆಯಲ್ಲಿ ಮುಸ್ಲಿಮ್ ದರ್ಗಾ ಇದೆ. ಕೆರೆಯನ್ನು ಯಾರು ಕಟ್ಟಿಸಿದರೆಂಬುದರ ಬಗ್ಗೆ ಮಾಹಿತಿ ದೊರೆತಿಲ್ಲ. ಊರಿನ ಗ್ರಾಮಸ್ಥರಿಂದ ನಿರ್ಮಾಣವಾಗಿದೆ ಎಂದು ಊಹಿಸಬಹುದು. ಚಿಕ್ಕ ಕೆರೆಯು ಪಶ್ಚಿಮಾಭಿಮುಖವಾಗಿ ಇದೆ. ಈ ಪರಿಸರದಲ್ಲಿ ಹೆಚ್ಚಿನ ಕೆರೆಗಳ ಏರಿಯನ್ನು ಮಣ್ಣಿನಿಂದ ನಿರ್ಮಾಣ ಮಾಡಿದ್ದಾರೆ. ಚಿಕ್ಕ ಕೆರೆಗೆ ಕಾಲುವೆ ಮುಖಾಂತರ ಮಳೆನೀರು ಬಂದು ಸಂಗ್ರಹವಾಗುತ್ತದೆ. ಇಲ್ಲಿಯ ಜನರು ಕೃಷಿಯನ್ನು ಅವಲಂಬಿಸಿದ್ದು ಕಂಡು ಬಂದಿದೆ. ಪರಸಾಪೂರ

ಊರಿನ ಮಧ್ಯದಲ್ಲಿ ಪ್ರಾಚೀನ ಕಾಲದ ಕಲ್ಮೇಶ್ವರ ದೇವಾಲಯವಿದೆ. ಚಿಕ್ಕ ಕೆರೆಯ ಏರಿಯು ನೇರವಾಗಿದ್ದು ಕೊನೆಯಲ್ಲಿ ಡೊಂಕಾಗಿದೆ.

### ೧೩. ಗಂಜಿಗಟ್ಟಿ ಹಿರೇಕೆರೆ

ಗಂಜಿಗಟ್ಟಿ ಕೆರೆಯು ಕಲಘಟಗಿ ತಾಲೂಕಿನ ಕೆರೆಗಳಲ್ಲಿ ಒಂದಾಗಿದೆ. ತಾಲೂಕಿನಿಂದ ೧೦ ಕಿ.ಮೀ ಅಂತರದಲ್ಲಿದೆ. ಈ ಕೆರೆಗೆ ದೊಡ್ಡಕೆರೆ ಎಂದು ಹೆಸರು ಬರಲು ಕಾರಣ ಈ ಪ್ರದೇಶದಲ್ಲಿ ನಾಲ್ಕು ಕೆರೆಗಳಿದ್ದ ಕಾರಣ ಅದರಲ್ಲಿ ಇದು ದೊಡ್ಡದಾದ ಕೆರೆಯಾಗಿದ್ದರಿಂದ ಈ ಕೆರೆಗೆ ದೊಡ್ಡಕೆರೆ ಎಂಬ ಹೆಸರು ಬಂದಿದೆ. ದೊಡ್ಡಕೆರೆ ಸುಮಾರು ೨೦ ಹೆಕ್ಟರ್ ಪ್ರದೇಶವನ್ನು ಹೊಂದಿದೆ. ಕೆರೆಯ ಹತ್ತಿರ ಯಾವುದೇ ದೇವಾಲಯ ಕಂಡು ಬಂದಿಲ್ಲ. ಕೆರೆಯನ್ನು ಯಾರು ಕಟ್ಟಿಸಿದರೆಂಬುದರ ಬಗ್ಗೆ ಯಾವುದೇ ಮಾಹಿತಿ ದೊರಕಿಲ್ಲ. ಕೆರೆಯು ಪಶ್ಚಿಮಾಭಿಮುಖವಾಗಿದ್ದು, ಕೆರೆಯ ಏರಿಯು ನೇರವಾಗಿದ್ದು ಕೊನೆಯ ಹಂತದಲ್ಲಿ ಕೆರೆಯು ಇಂಗ್ಲೀಷ್ ವರ್ಣಮಾಲೆಯ 'ಯು' ಆಕಾರದಲ್ಲಿದೆ. ಕೆರೆಯ ಏರಿಯನ್ನು ಕಲ್ಲು ಮತ್ತು ಮಣ್ಣಿನಿಂದ ನಿರ್ಮಾಣ ಮಾಡಿದ್ದಾರೆ. ಇದು ಸಹ ಮಳೆಯಾಶ್ರಿತ ಕೆರೆಯಾಗಿದೆ. ಕೆರೆಯನ್ನೇ ಅವಲಂಬಿಸಿ ಜನರು ಬೇಸಾಯವನ್ನು ಮಾಡುತ್ತಿದ್ದಾರೆ. ಕೆರೆಯ ಸುತ್ತಲೂ ಮರಗಳು ಆವರಿಸಿಕೊಂಡಿವೆ. ಅದೇ ರೀತಿ ಈ ಪ್ರದೇಶದಲ್ಲಿ ಕಲ್ಯಾಣ ಚಾಲುಕ್ಯರ ಕಾಲದ ರಾಮಲಿಂಗೇಶ್ವರ ದೇವಾಲಯ ಹಾಗೂ ಎಡಭಾಗದಲ್ಲಿ ಕಲ್ಮೇಶ್ವರ ದೇವಾಲಯವಿದ್ದು ಅದರ ಎದುರಿಗೆ ನಂದಿ ಮೂರ್ತಿ ಸಹ ಇದೆ ಮತ್ತು ದೇವಾಲಯ ಪಕ್ಕದಲ್ಲಿ ಒಂದು ವೀರಗಲ್ಲು ಇದ್ದದ್ದು ಕಂಡುಬಂದಿದೆ. ಈ ಕೆರೆಗೆ ಹೊಂದಿಕೊಂಡಂತೆ ಒಂದು ಕೋಡಿ ಹಾಗೂ ಒಂದು ತೂಬನ್ನು ನಿರ್ಮಾಣ ಮಾಡಿದ್ದಾರೆ. ಕೆರೆಯ ಏರಿಯು ೮೦೦ ಮೀ ಉದ್ದವಿದೆ ಹಾಗೂ ಅದರ ಅಗಲ ೪ ಮೀ ಇದೆ.

### ೧೪. ತಬಕದಹೊನ್ನಳ್ಳಿಯ ತುಂಬಿಕೆರೆ

ತಬಕದಹೊನ್ನಳ್ಳಿಯ ತುಂಬಿಕೆರೆಯು ಕಲಘಟಗಿ ತಾಲೂಕಿನ ಕೆರೆಗಳಲ್ಲಿ ಒಂದಾಗಿದೆ. ತಾಲೂಕಿನಿಂದ ೬ ಕಿ.ಮೀ ಅಂತರದಲ್ಲಿದೆ. ಈ ಕೆರೆಗೆ ತುಂಬಿಕೆರೆ ಎಂಬ ಹೆಸರು ಬರಲು ಕಾರಣ ಈ ಊರಿನಲ್ಲಿ ಪ್ರಾಚೀನ ಕಾಲದಲ್ಲಿದ್ದ ರಾಜ-ರಾಣಿಯರು ಬಂಗಾರದ ತಾಟಿನಲ್ಲಿ ಎಲೆ ಅಡಿಕೆ ಇಟ್ಟುಕೊಟ್ಟಿದ್ದರಿಂದ ಅದಕ್ಕೆ ಈ ಹೆಸರು ಬಂದಿದೆ ಮತ್ತು ತಬಕ ಎಂದರೆ ಬಂಗಾರ ಆದ್ದರಿಂದ ಇದನ್ನು ತಬಕದಹೊನ್ನಳ್ಳಿ ಎಂದು ಹೆಸರು ಬಂದಿದೆ ಎಂದು ಗ್ರಾಮಸ್ಥರಿಂದ ತಿಳಿದು ಬಂದಿದೆ. ಈ ಕೆರೆಯನ್ನು ಸಿ.ಎ.ಪಾಟೀಲ್ ಎಂಬುವರು ಕಟ್ಟಿಸಿದರು ಎಂದು ಹೇಳಲಾಗಿದೆ. ಈ ಕೆರೆಯ ಕುರಿತು ಆ ಊರಿನ ತಲಾಟಿಯವರು ಈ ಜಮೀನು ವಶಕ್ಕಿಲ್ಲ ಎಂದು ಮೊಟ ಕರಾಬ ಬರೆದರು ಮತ್ತು

ಇದನ್ನು ಕಾಮಗಾರಿ ಮಾಡಲು ಪ್ರಾರಂಭಿಸಿದರೆಂದು ಹೇಳಬಹುದು. ಕೆರೆಯು ಊರಿನ ಉತ್ತರ ದಿಕ್ಕಿನಲ್ಲಿ ಕಂಡು ಬಂದಿದೆ. ಕೆರೆಯಿಂದ ೨೦೦ ಮೀಟರ ದೂರದಲ್ಲಿ ವಿಠ್ಠಲ ದೇವಾಲಯವಿದೆ. ಕೆರೆಯ ಏರಿಯ ಒಳ ಭಾಗವನ್ನು ಕಲ್ಲಿನಿಂದ ಮತ್ತು ಹೊರಭಾಗ ಮಣ್ಣಿನಿಂದ ಕಟ್ಟಿದ್ದಾರೆ. ಈ ಕೆರೆಗೆ ಕಾಲುವೆ ಮುಖಾಂತರವಾಗಿ ಮಳೆ ನೀರು ಬಂದು ಸಂಗ್ರಹಣೆಯಾಗುತ್ತದೆ. ತುಂಬಿ ಕೆರೆಯು ಈ ಊರಿನ ಜನರ ಜೀವಾಳವಿದ್ದಂತೆ. ಈ ಊರಿನ ಜನರು ಕೃಷಿಯನ್ನು ಅವಲಂಬಿಸಿದ್ದಾರೆ. ಈ ಕೆರೆಯ ಏರಿಯು ೫೦೦ ಮೀ ಉದ್ದವಿದೆ ಹಾಗೂ ಅದರ ಅಗಲ ೩ ಮೀ ಎಂದು ಹೇಳಬಹುದು.

### ೧೫. ಕಲಘಟಗಿಯ ಮಂಗೇಶಕೆರೆ

ಮಂಗೇಶ ಕೆರೆಯು ಕಲಘಟಗಿ ತಾಲೂಕಿನಲ್ಲಿರುವ ಕೆರೆಗಳಲ್ಲಿ ಒಂದಾಗಿದೆ. ಇದು ತಾಲೂಕು ಕೇಂದ್ರದಿಂದ ಎರಡು ಕಿ.ಮೀ. ಅಂತರದಲ್ಲಿದೆ. ಈ ಕೆರೆಗೆ ಸಂಬಂದಪಟ್ಟಂತಹ ಯಾವುದೇ ಆಧಾರಗಳು ಲಭ್ಯವಿಲ್ಲ ಮತ್ತು ಕೆರೆಯ ಹತ್ತಿರ ಯಾವುದೇ ದೇವಾಲಯ ಕಂಡುಬರುವುದಿಲ್ಲ. ಕೆರೆಯು ಪೂರ್ವಾಭಿಮುಖವಾಗಿದ್ದು, ಈ ಕೆರೆಗೆ ಮಂಗೇಶಕೆರೆ ಎಂದು ಹೆಸರು ಬರಲು ಕಾರಣವೇನೆಂದರೆ ಈ ಕೆರೆಯ ಜಾಗದಲ್ಲಿ ಮೊದಲು ಅರಣ್ಯ ಪ್ರದೇಶವಿದ್ದು, ನಂತರ ಅದನ್ನು ಒತ್ತುವರಿ ಮಾಡಿ ಕೆರೆ ನಿರ್ಮಾಣ ಮಾಡಿದ್ದಾರೆ ಎಂದು ತಿಳಿದು ಬಂದಿದೆ. ಕಲಘಟಗಿಯಲ್ಲಿ ಮಂಗಗಳ ಪ್ರಮಾಣ ಹೆಚ್ಚಾಗಿದ್ದು, ಮಂಗಗಳು ಈ ಕೆರೆಯಲ್ಲಿ ದಿನಂಪ್ರತಿ ನೀರನ್ನು ಕುಡಿಯಲು ಬರುತ್ತಿದ್ದವು ಆದ್ದರಿಂದ ಈ ಕೆರೆಗೆ ಮಂಗೇಶ ಕೆರೆ ಎಂದು ಹೆಸರು ಬಂದಿದೆ. ಈ ಕೆರೆಗೆ ಸಂಬಂದಪಟ್ಟ ಎರಡು ನಾಲೆಗಳ ಮುಖಾಂತರವಾಗಿ ಮಳೆ ನೀರು ಬಂದು ಕೆರೆಗೆ ಸಂಗ್ರಹಣೆಯಾಗುತ್ತದೆ. ಕೆರೆಯ ಆಯಕಟ್ಟಿನ ಪ್ರದೇಶದವರು ಈ ಕೆರೆಯ ನೀರನ್ನು ತಮ್ಮ ಹೊಲಗಳಿಗೆ ಕಾಲುವೆ ಮುಖಾಂತರ ಹರಿಸಿಕೊಳ್ಳುತ್ತಾರೆ. ಕೆರೆಯ ಹತ್ತಿರವಿರುವ ಜಮೀನುಗಳಿಗೆ ಈ ಕೆರೆಯು ಜೀವಾಳವಿದ್ದಂತೆ. ಇದರ ಕಾಮಗಾರಿಯ ಕಾರ್ಯವನ್ನು ಸರ್ಕಾರ ನೋಡಿಕೊಳ್ಳುತ್ತಿದೆ. ಈ ಕೆರೆಯಲ್ಲಿ ಎರಡು ತುದಿಗೆ ಎರಡು ಕಾಲುವೆಗಳಿದ್ದು ಮತ್ತು ಒಂದು ಕೋಡಿಯನ್ನು ಸಹ ನಿರ್ಮಿಸಿದ್ದಾರೆ.

### ೧೬. ಮಡಕಿಹೊನ್ನಳ್ಳಿ ಹಿರೇಕೆರೆ

ಮಡಕಿಹೊನ್ನಳ್ಳಿ ತಾಲೂಕು ಕೇಂದ್ರವಾದ ಕಲಘಟಗಿಯಿಂದ ೧೫ ಕಿ.ಮೀ ಅಂತರದಲ್ಲಿದೆ. ಕಲಘಟಗಿ ತಾಲೂಕಿನ ಕೆರೆಗಳಲ್ಲಿ ಇದು ಕೂಡಾ ಒಂದಾಗಿದೆ. ಈ ಕೆರೆಗೆ ಸಂಬಂದಪಟ್ಟ ಯಾವುದೇ ಆಧಾರಗಳು ಸಿಗುವುದಿಲ್ಲ. ಆದರೆ ಊರಿನ ಕಲ್ಮೇಶ್ವರ ದೇವಾಲಯದಲ್ಲಿ ಒಂದು

ವೀರಗಲ್ಲು ಮತ್ತು ಒಂದು ಶೈವ ದಾನ ಶಾಸನ ಇರುವುದು ಕಂಡುಬಂದಿದೆ. ಆ ಶಾಸನವು ಹಾಳಾಗಿದ್ದು ವಿವರ ಅಸ್ಪಷ್ಟವಾಗಿದೆ. ಅದೇ ರೀತಿ ಇನ್ನೂ ಕೆಲವು ಭಗ್ನಗೊಂಡ ಅವಶೇಷಗಳು ಆ ದೇವಾಲಯದ ಹಿಂದೆ ಬಿದ್ದಿವೆ. ಶಾಸನವು ಗೋವೆ ಕದಂಬರ ಪೆರ್ಮಾಡಿದೇವನ ಕಾಲದ್ದು. ೧೧೫೮ ರಲ್ಲಿ ಉರುಗೇಶ್ವರ ದೇವರಿಗೆ ದಾನವನ್ನು ಉಲ್ಲೇಖಿಸುತ್ತದೆ. ಇದರಿಂದ ಈ ಕೆರೆಯು ಸಹ ಪ್ರಾಚೀನ ಕಾಲದಲ್ಲಿ ಇದ್ದಿರಬಹುದೆಂದು ಹೇಳಬಹುದು. ಈ ದೇವಾಲಯದ ಮೂಲ ಹೆಸರು ಉರುಗೇಶ್ವರ ಎಂದಿರಬಹುದು. ಮಡಕಿಹೊನ್ನಳ್ಳಿಕೆರೆಯನ್ನು ಯಾರು ಕಟ್ಟಿಸಿದರೆಂಬುವುದರ ಬಗ್ಗೆ ಆಧಾರ ಸಿಕ್ಕಿಲ್ಲ. ಇದನ್ನು ಹೀರೆ ಕೆರೆ ಎನ್ನಲು ಕಾರಣ ಈ ಕೆರೆಯು ಎಲ್ಲ ಕೆರೆಯ ತರಹ ಇರದೇ ಇದು ವಿಶಿಷ್ಟವಾದ ಕೆರೆಯಾಗಿದೆ. ಕೆರೆಯು ಅತಿ ಉದ್ದವಾಗಿದ್ದು ಅದು ಹಳ್ಳದ ರೂಪದಲ್ಲಿದ್ದದ್ದು ಕಂಡು ಬಂದಿದೆ. ಹೀರೆಕೆರೆಯು ಊರಿನ ಉತ್ತರ ದಿಕ್ಕಿನಲ್ಲಿದೆ. ಕೆರೆಯು ಉದ್ದವು ೨ ಕಿ.ಮೀ ದೂರದವರೆಗೂ ವ್ಯಾಪಿಸಿದೆ. ಕೆರೆಯ ಹತ್ತಿರ ನಾಲ್ಕು ಮಡಿಗಳು ಇರುವುದು ಕಂಡು ಬಂದಿವೆ. ಆ ಕೆರೆಗೆ ಹೊಂದಿಕೊಂಡಂತೆ ಒಂದು ಕಟ್ಟೆಯು ಇದೆ. ಕೆರೆಗೆ ೪ ಕಿ.ಮೀ ದೂರ ಹೂಲಿಕಟ್ಟಿ ಮತ್ತು ತುಮರಿಕೊಪ್ಪ ಗ್ರಾಮಗಳು ಇವೆ. ಇದು ಮಳೆಯಾಶ್ರಿತ ಕೆರೆಯಾಗಿದ್ದು, ಕೆರೆಯ ನೀರನ್ನು ಆಯಕಟ್ಟಿನ ಜನರು ತಮ್ಮ ಗದ್ದೆಗಳಿಗೆ ಕಾಲುವೆ ಮುಖಾಂತರ ಅಥವಾ ಪಂಪಸೆಟ್ ಮೂಲಕ ಬಿಟ್ಟುಕೊಂಡು ಬೇಸಾಯವನ್ನು ಮಾಡುತ್ತಾರೆ. ಈ ಕೆರೆಯ ನೀರನ್ನು ಕುಡಿಯಲು ಬಳಕೆ ಮಾಡುವುದಿಲ್ಲ. ಕೆರೆಯ ಹೂಳೆತ್ತುವ ಕಾರ್ಯವನ್ನು ಸರ್ಕಾರ ೨೦೧೦ರಲ್ಲಿ ಮಾಡಿದೆ. ಆಯಕಟ್ಟಿನ ಪ್ರದೇಶದ ಜನರು ಇಲ್ಲಿ ಭತ್ತ ಗೋಧಿ, ಗೋವಿನಜೋಳ, ಕಬ್ಬು, ಹತ್ತಿ ಮುಂತಾದ ಬೆಳೆಯನ್ನು ಬೆಳೆಯುತ್ತಾರೆ. ಮಡಕಿಹೊನ್ನಳ್ಳಿಯ ಜನಸಂಖ್ಯೆ ೧,೫೦೦ ಇದೆ ಎಂದು ಕ್ಷೇತ್ರಕಾರ್ಯ ಸಂದರ್ಭದಲ್ಲಿ ತಿಳಿದು ಬಂದಿದೆ.

### ೧೭. ಉಗ್ಗಿನಕೇರಿ ಹೀರೆಕೆರೆ

ತಾಲೂಕು ಕೇಂದ್ರವಾದ ಕಲಘಟಗಿಯಿಂದ ೧೦ ಕಿ.ಮೀ ಅಂತರದಲ್ಲಿದೆ. ಕಲಘಟಗಿ ತಾಲೂಕಿನ ಕೆರೆಗಳಲ್ಲಿ ಇದು ಕೂಡಾ ಒಂದಾಗಿದೆ. ಈ ಕೆರೆಗೆ ಸಂಬಂದಪಟ್ಟಂತೆ ಭೂಮಿ ದಾನ ಮಾಡಿದ ವಿವರವು ಉಗ್ಗಿನಕೇರಿಯ ಹನುಮಂತ ದೇವರ ಗುಡಿಯ ಮುಂದಿನ ಎರಡು ಶಾಸನಗಳಿಂದ ತಿಳಿದುಬರುತ್ತದೆ. ಅವು ಮೂರನೇ ಸೋಮೇಶ್ವರನ ಕಾಲಕ್ಕೆ ಸಂಬಂಧಪಟ್ಟಿವೆ. ಅಂದರೆ ಕ್ರಿ.ಶ.೧೧೭೧ರಲ್ಲಿ ಉದಯಾದಿತ್ಯನು ಮೂಕೇಶ್ವರ ದೇವರಿಗೆ ಭೂಮಿಯನ್ನು ದಾನಮಾಡಿದನೆಂದು ಉಲ್ಲೇಖಿಸಿದೆ.

ಉಗ್ಗಿನಕೇರಿ ಓರೆಕೆರೆಯನ್ನು ಕೆಲವು ಮೂಲಗಳಿಂದ ಇದನ್ನು ಬ್ರಿಟಿಷರು ಕಟ್ಟಿಸಿದರೆಂದು ತಿಳಿದು ಬರುತ್ತದೆ. ಆದರೆ ಶಾಸನದಲ್ಲಿ ಭೂಮಿದಾನದ ಬಗ್ಗೆ ಉಲ್ಲೇಖವಿರುವುದರಿಂದ ಅದನ್ನು

ಪ್ರಾಚೀನ ಕಾಲದಲ್ಲಿ ಕಟ್ಟಿರಬಹುದು. ಈ ಕೆರೆಯು ದೊಡ್ಡದಾಗಿರುವುದರಿಂದ ಇದನ್ನು ಹಿರೇಕೆರೆ ಎಂದು ಕರೆಯುತ್ತಾರೆ. ಕೆರೆಯು ಊರಿನ ಪೂರ್ವದಿಕ್ಕಿನಲ್ಲಿದೆ ಮತ್ತು ಕೆರೆಯ ಏರಿಯ ಉದ್ದ ಒಂದು ಕಿ. ಮೀ ಅಂತರದಲ್ಲಿದೆ. ಈ ಕೆರೆಯು ಎಂಟು ಎಕರೆ ವಿಸ್ತಾರವನ್ನು ಹೊಂದಿದೆ. ಇದಕ್ಕೆ ಹೊಂದಿಕೊಂಡಂತೆ ಪೂರ್ವಕ್ಕೆ ಮಿಶ್ರಿಕೋಟೆ ಮತ್ತು ಉತ್ತರಾಭಿಮುಖವಾಗಿ ಕುರುವಿನಕೊಪ್ಪ ಗ್ರಾಮ ಇರುವುದು ಕಂಡು ಬಂದಿದೆ. ಉಗ್ಗಿನಕೆರೆಯು ಊರಿನ ಜನರ ಜೀವಾಳವಿದ್ದಂತೆ ಮತ್ತು ಇದು ಮಳೆಯಾಶ್ರಿತ ಕೆರೆಯಾಗಿದೆ ಎಂದು ಹೇಳಬಹುದು. ಈ ಕೆರೆಗೆ ನೀರು ಕಿನಾಲು ಅಥವಾ ಕಾಲುವೆ ಮುಖಾಂತರ ಬಂದು ಸಂಗ್ರಹವಾಗುತ್ತದೆ. ಕೆರೆಗೆ ಹೊಂದಿಕೊಂಡು ಒಂದು ತೂಬು ಇರುವುದು ಕಂಡುಬಂದಿದೆ. ಈ ಕೆರೆಯ ಹತ್ತಿರ ಯಾವುದೇ ದೇವಾಲಯವಿಲ್ಲ.

### ೧೮. ಬೀರವಳ್ಳಿ ಕಡಬಗಟ್ಟಿಕೆರೆ

ಬೀರವಳ್ಳಿ ಕಡಬಗಟ್ಟಿಕೆರೆಯು ತಾಲೂಕು ಕೇಂದ್ರವಾದ ಕಲಘಟಗಿಯಿಂದ ೧೪ ಕಿ.ಮೀ ಅಂತರದಲ್ಲಿದೆ. ಕಲಘಟಗಿ ತಾಲೂಕಿನ ಕೆರೆಗಳಲ್ಲಿ ಇದು ಕೂಡಾ ಒಂದು. ಈ ಕೆರೆಯ ಕುರಿತು ಯಾವುದೇ ಶಾಸನಾಧಾರಗಳು ಹಾಗೂ ಇತರ ದಾಖಲೆಗಳು ಲಭ್ಯವಿಲ್ಲ. ಕೆರೆಯನ್ನು ೧೯೫೧ ರಲ್ಲಿ ನಿರ್ಮಾಣ ಮಾಡಿದರ ಬಗ್ಗೆ ಕೆರೆಯ ಹತ್ತಿರವಿರುವ ಒಂದು ಕಲ್ಲಿನಲ್ಲಿ ಇದರ ನಿರ್ಮಾಣದ ತಾಲೂಕನ್ನು ನಮೂದಿಸಲಾಗಿದೆ. ಆದ್ದರಿಂದ ಅದನ್ನು ಆಧುನಿಕ ಕಾಲದ ಕೆರೆ ಎಂದು ಹೇಳಬಹುದು. ಕೆರೆಯ ನಿರ್ಮಾಣದ ಶೈಲಿಯನ್ನು ನೋಡಿದಾಗ ಇದು ವೃತ್ತಾಕಾರದಲ್ಲಿರುವುದು ಕಂಡುಬಂದಿದೆ. ಆ ಕೆರೆಗೆ ಹೊಂದಿಕೊಂಡಂತೆ ಒಂದು ಕೋಡಿಯನ್ನು ನಿರ್ಮಾಣ ಮಾಡಿದ್ದಾರೆ. ಕೆರೆಯು ಊರಿನ ಉತ್ತರ ದಿಕ್ಕಿನಲ್ಲಿ ಮತ್ತು ಬೆಂಡರಗಟ್ಟಿಗೆ ಹೋಗುವ ಮಾರ್ಗಮದ್ಯದಲ್ಲಿ ಕಂಡುಬರುತ್ತದೆ. ಕಡಬಗಟ್ಟಿಕೆರೆ ಇದೆ ಕೆರೆಯ ಸ್ವಲ್ಪ ದೂರದಲ್ಲಿ ಒಂದು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾಗಿರುವ ಕಲ್ಮೇಶ್ವರ ದೇವಾಲಯವು ಇದ್ದು ಪ್ರಾಚೀನ ದೇವಾಲಯವಾಗಿದೆ ಮತ್ತು ಇದನ್ನು ಪುನರ್ ನವೀಕರಣ ಮಾಡಿದ್ದಾರೆ ಎಂದು ತಿಳಿದುಬಂದಿದೆ. ಆ ದೇವಾಲಯದ ಹತ್ತಿರ ಒಂದು ವೀರಭದ್ರ ಮೂರ್ತಿ ಹಾಗೂ ಕರಿಯಮ್ಮನ ಮೂರ್ತಿ ಸಹ ಇದೆ. ಈ ಕೆರೆಯ ಏರಿಯು ೪೦೦ ಮೀ ಉದ್ದವಾಗಿದೆ ಮತ್ತು ಆಯಕಟ್ಟಿನ ಪ್ರದೇಶದವರು ಕೆರೆಯ ನೀರನ್ನು ತಮ್ಮ ಹೊಲಗಳಿಗೆ ಉಪಯೋಗಿಸಿಕೊಳ್ಳುತ್ತಾರೆ. ಇದು ತಬಕದಹೊನ್ನಳ್ಳಿಯಿಂದ ೪ ಕಿ. ಮೀ ಅಂತರದಲ್ಲಿದೆ. ಈ ಒಂದು ಪ್ರದೇಶದಲ್ಲಿ ಕಪ್ಪು ಮಿಶ್ರಿತ ಕೆಂಪು ಮಣ್ಣು ಇರುವುದು ಕಂಡುಬಂದಿದೆ. ಇದು ಸಹ ಮಳೆಯಾಶ್ರಿತ ಕೆರೆಯಾಗಿದೆ.

## ೧೯. ಬ್ಲಂಡರಗಡ್ಡಿ ಹೊಸಕೆರಿ

ತಾಲೂಕು ಕೇಂದ್ರವಾದ ಕಲಘಟಗಿಯಿಂದ ೨೦ ಕಿ.ಮೀ ಅಂತರದಲ್ಲಿದೆ. ಕಲಘಟಗಿ ತಾಲೂಕಿನ ಕೆರೆಗಳಲ್ಲಿ ಇದು ಕೂಡಾ ಒಂದಾಗಿದೆ. ಈ ಪ್ರದೇಶದ ಅರ್ಧ ಭಾಗ ಕಲಘಟಗಿಗೆ ಸೇರಿದ್ದು ಮತ್ತು ಇನ್ನರ್ಧ ಶಿಗ್ಗಾವಿ ಭಾಗಕ್ಕೆ ಸೇರಿದೆ ಎಂದು ಹೇಳಲಾಗಿದೆ. ಈ ಕೆರೆಯನ್ನು ಯಾರು ಕಟ್ಟಿಸಿದರೆಂಬುದರ ಬಗ್ಗೆ ಯಾವುದೇ ಶಾಸನಾಧಾರಗಳು ಹಾಗೂ ಇತರ ದಾಖಲೆಗಳು ಲಭ್ಯವಿಲ್ಲ. ಈ ಊರಿನ ಅಡವಿ ಎಂಬ ಸೋಮೇಶ್ವರ ದೇವಾಲಯದಲ್ಲಿ ಒಂದು ಶಾಸನವಿದ್ದು, ಅದು ತೃಟಿತವಾಗಿದೆ. ಈ ಕೆರೆಯು ೧೦ ಎಕರೆ ವಿಸ್ತೀರ್ಣವನ್ನು ಹೊಂದಿದೆ ಎಂದು ಹೇಳಬಹುದು. ಕೆರೆಗೆ ಹೊಂದಿಕೊಂಡಂತೆ ಎರಡು ತೂಬುಗಳು ಮತ್ತು ಒಂದು ಕೋಡಿಯನ್ನು ಕಾಣಬಹುದು. ಈ ಕೆರೆಯ ಏರಿಯು ಒಂದು ಕಿ. ಮೀ ಅಂತರದಲ್ಲಿದೆ. ಕೆರೆಯ ಏರಿಯ ಅಗಲ ೩.೨ ಮೀ ಇದೆ. ಈ ಕೆರೆಯು ಮಳೆಯಾಶ್ರಿತ ಕೆರೆಯಾಗಿದೆ. ಇಲ್ಲಿಯ ನೀರನ್ನು ಆಯಕಟ್ಟಿನ ಪ್ರದೇಶದ ಜನರು ತಮ್ಮ ಗದ್ದೆಗಳಿಗೆ ಕಾಲುವೆ ಮುಖಾಂತರ ಬಿಟ್ಟುಕೊಳ್ಳುತ್ತಾರೆ ಎಂದು ತಿಳಿದುಬಂದಿದೆ. ಇಲ್ಲಿ ಯಾವ ದೇವಾಲಯವು ಇರುವುದು ಕಂಡುಬಂದಿಲ್ಲ. ಈ ಕೆರೆಯನ್ನು ಆಧುನಿಕ ಕಾಲದಲ್ಲಿ ನಿರ್ಮಾಣ ಮಾಡಿರಬಹುದು ಎಂದು ಹೇಳಬಹುದು.

### ಕೆರೆಗಳ ನಿರ್ಮಾಣ

ಪ್ರಸ್ತುತ ಕಲಘಟಗಿ ತಾಲೂಕಿನ ಕೆರೆಗಳ ಅಧ್ಯಯನದ ಕುರಿತು ಕ್ಷೇತ್ರಕಾರ್ಯ ಮಾಡುವ ಸಂದರ್ಭದಲ್ಲಿ ಕಲಘಟಗಿ ಪರಿಸರದಲ್ಲಿರುವ ಕೆಲವು ಕೆರೆಗಳ ನಿರ್ಮಾಣದ ಬಗ್ಗೆ ತಿಳಿದು ಬಂದ ಮಾಹಿತಿ ಪ್ರಕಾರ ಕೆರೆಯನ್ನು ಯಾವುದಕ್ಕಾಗಿ ನಿರ್ಮಿಸುತ್ತಿದ್ದರು, ಯಾವ ಸ್ಥಳದಲ್ಲಿ ಅವುಗಳ ರಚನೆ ಮಾಡುತ್ತಿದ್ದರು, ಯಾವುದುಕೋಸ್ಕರ ನಿರ್ಮಾಣ ಮಾಡುತ್ತಿದ್ದರು ಎಂಬುದರ ಬಗ್ಗೆ ತಿಳಿದುಕೊಳ್ಳಬಹುದು. ಪ್ರಾಚೀನ ಕಾಲದಲ್ಲಿ ಕೆರೆಯನ್ನು ಬೆಟ್ಟ-ಗುಡ್ಡಗಳ ಇಳಿಜಾರು ಪ್ರದೇಶಗಳಲ್ಲಿ ಕೆರೆಯನ್ನು ಆ ಪ್ರದೇಶದ ಜನರ ಬಳಕೆಗೋಸ್ಕರ ಹಾಗೂ ಪ್ರಾಣಿ-ಪಕ್ಷಿಗಳಿಗೂ ಸಹಿತ ಕೆರೆಯ ನೀರು ಉಪಯೋಗವಾಗಲೆಂದು ಅವುಗಳನ್ನು ಅಲ್ಲಿ ನಿರ್ಮಿಸುತ್ತಿದ್ದರು. ಪ್ರಾಚೀನ ಕಾಲದ ಒರಿಯರು ಜನರಿಗೆ ಉಪಯೋಗವಾಗಲೆಂದು ಒಂದು ಒಳ್ಳೆಯ ಕಾರ್ಯವನ್ನು ಮಾಡೋಣವೆಂದು ಇಂತಹ ಒಂದು ಕಾರ್ಯವನ್ನು ಮಾಡುತ್ತಿದ್ದರು. ಉದಾ; ಕಲಘಟಗಿ ಪರಿಸರದಲ್ಲಿ ರುಸ್ತುಂಕೆರೆ ಹಾಗೂ ಮಂಗೇಶಕೆರೆ ಪ್ರಸ್ತುತದಲ್ಲಿ ಬಳಕೆಯಲ್ಲಿರುವ ಕೆರೆಗಳಾಗಿವೆ. ಈ ಕೆರೆಗಳು ತಲೆ ತಲೆಮಾರಿನವರಿಗೆ ಅನುಕೂಲವಾಗಲೆಂದು ಇಂತಹ ಕಾರ್ಯವನ್ನು ಮಾಡುತ್ತಿದ್ದರು.

ಪ್ರಾಚೀನ ಕಾಲದಲ್ಲಿ ಇಂತಹ ಕೆರೆಗಳನ್ನು ರಾಜರು, ಅಧಿಕಾರಿಗಳು, ಊರಿನ ಮುಖಂಡರು ಇಂತಹ ಕಾರ್ಯವನ್ನು ರೈತರ ಸಲಹೆ ಮೇರೆಗೆ ದೊಡ್ಡದಾದ ಹಾಗೂ ಚಿಕ್ಕ ಕೆರೆಗಳನ್ನು ನಿರ್ಮಿಸುತ್ತಿದ್ದರು. ಇವರ ಬಗ್ಗೆ ಶಾಸನದಲ್ಲಿ ತಿಳಿದುಕೊಳ್ಳಬಹುದಾಗಿದೆ. ಈ ಕೆರೆಗೆ ಹೊಂದಿಕೊಂಡಂತೆ ಅದರ ಅಂಗಳದಲ್ಲಿ ಕೋಡಿಗಳನ್ನು ನಿರ್ಮಿಸುತ್ತಿದ್ದರು ಎಂದು ಹೇಳಬಹುದು.

ಕರ್ನಾಟಕದಲ್ಲಿ ಇಂತಹ ಅನೇಕ ಕೆರೆಗಳನ್ನು ನೋಡಬಹುದು ಅದರಲ್ಲಿ ಪ್ರಮುಖವಾಗಿ ವೈಶ್ಯರ ಕೆರೆ ಕೂಡ ಕಂಡುಬಂದಿವೆ. ಉದಾಹರಣೆಗೆ: ಸುಳೆ ಕೆರೆ, ಆಂಧ್ರಪ್ರದೇಶದ ಸಾನಿ ಎಂಬ ಕೆರೆ. ರಾಜರು ನಿರ್ಮಿಸಿದ ಕೆರೆ, ರೈತರು ನಿರ್ಮಿಸಿದ ಕೆರೆ ಹೀಗೆ ಈ ತಾಲೂಕಿನಲ್ಲಿ ಇಂತಹ ಕೆರೆಗಳು ಕಂಡುಬಂದಿವೆ. ಅದರಲ್ಲಿ ಪ್ರಮುಖ ಕೆರೆಯು ಅತ್ಯಂತ ಬಹಳ ವಿಸ್ತಾರವಾದ ಜಲಾನಯನ ಪ್ರದೇಶವನ್ನು ಹೊಂದಿದ್ದು ಕಂಡುಬಂದಿದೆ. ಅದರಲ್ಲಿ ಪ್ರಮುಖವಾಗಿ ೨೦,೦೦೦ ಸಾವಿರ ಎಕರೆ ಜಲಾನಯನ ಪ್ರದೇಶ, ೧೦,೦೦೦ ಎಕರೆ, ೧,೦೦೦ ಎಕರೆ ಪ್ರದೇಶ ಹಾಗೂ ೪೦೦ ಎಕರೆ ಜಲಾನಯನ ಹೊಂದಿದ ಕೆರೆಗಳು ಕರ್ನಾಟಕ ಹಾಗೂ ಪ್ರಸ್ತುತ ತಾಲೂಕಿನ ದೇವಿಕೊಪ್ಪ ಗ್ರಾಮದಲ್ಲಿ ಸುಮಾರು ೪೩೩ ಎಕರೆ ಜಲಾನಯನ ಪ್ರದೇಶ ಹೊಂದಿದ ಕೆರೆ ಇರುವುದು ಕಂಡುಬಂದಿದೆ.

ಇಲ್ಲಿನ ಭೌಗೋಳಿಕ ಲಕ್ಷಣದ ಆಧಾರದ ಮೇಲೆ ಕೆರೆಗಳ ನಿರ್ಮಾಣ ಮಾಡಿರುವುದು ಕಂಡು ಬಂದಿದೆ. ಅದೇರೀತಿ ಕೆರೆಯ ತಳದಲ್ಲಿ ನೀರು ಶೇಖರಣೆಯಾಗಬೇಕೆಂದರೆ ಆ ಭೂಮಿಯು ಭೌಗೋಳಿಕವಾಗಿ ಸಮೃದ್ಧಿಯಾಗಬೇಕು ಅಂದರೆ ನೀರು ನಿಲ್ಲುತ್ತದೆ. ಒಂದು ಕೆರೆಯಲ್ಲಿ ಸಾಮಾನ್ಯವಾಗಿ ಐದು ಹೆಕ್ಟರ್ ಪ್ರದೇಶ ನೀರು ಇದ್ದು ಅದರ ಕೆಳಮಟ್ಟದಲ್ಲಿ ಒಂದು ಹೆಕ್ಟರ್ ನೀರು ಹೋದರೆ ಉಳಿದ ನಾಲ್ಕು ಹೆಕ್ಟರ್ ನೀರು ಕೆರೆಯಲ್ಲಿ ಉಳಿಯುತ್ತದೆ. ಇಲ್ಲದಿದ್ದರೆ ಬಿಸಿಲಿಗೆ ನೀರು ಆವಿಯಾಗಿ ಹೋಗುತ್ತದೆ. ಹೀಗಾಗದೆ ಇರುವುದಕ್ಕೆ ಅವುಗಳ ತಳದಲ್ಲಿ ಕಲ್ಲಿನ ಗಚ್ಚನ್ನು ನಿರ್ಮಿಸುತ್ತಾರೆ. ಇದರಿಂದ ನೀರಿನ ಇಳಿಮುಖ ಪ್ರಮಾಣ ಕಡಿಮೆಯಾಗುತ್ತದೆ. ಇಲ್ಲಿನ ಕೆರೆಗಳ ಪ್ರಮಾಣದ ಆಧಾರದ ಮೇಲೆ ಅಲ್ಲಿ ಒಂದು ಅಥವಾ ಎರಡು ಕೋಡಿಗಳನ್ನು ನಿರ್ಮಾಣ ಮಾಡಿರುವುದು ಕಂಡು ಬಂದಿದೆ. ಅದೇರೀತಿ ಕೆರೆಗಳಿಗೆ ಹೊಂದಿಕೊಂಡಂತೆ ಕಾಲುವೆಗಳನ್ನು ನಿರ್ಮಿಸಿರುವುದನ್ನು ಕಾಣಬಹುದು.

ಕೆರೆಯಲ್ಲಿನ ನೀರನ್ನು ರಕ್ಷಿಸಬೇಕೆಂದರೆ ಕೆರೆಯಲ್ಲಿ ದೊಡ್ಡದಾದ ಎರಡು ಕಲ್ಲನ್ನು ನಿಲ್ಲಿಸಿ ನಂತರ ಅವುಗಳ ಮೇಲೆ ಅದೇ ಗಾತ್ರದ ಉದ್ದವಾದ ಕಲ್ಲನ್ನು ಇಟ್ಟು ಹಾಗೂ ಅದಕ್ಕೆ ಕಟ್ಟಿಗೆಯ ತುಂಡನ್ನು ಇಡುತ್ತಿದ್ದರು. ಆ ಕಟ್ಟಿಗೆತುಂಡನ್ನು ತೆಗೆದರೆ ನೀರು ಆಯಕಟ್ಟಿನ ಪ್ರದೇಶಕ್ಕೆ ಕಾಲುವೆ ಮುಖಾಂತರ ಹರಿದು ಹೋಗುತ್ತದೆ. ನಂತರ ದಿನಮಾನದಲ್ಲಿ ಕೆರೆಗೆ ಕಬ್ಬಿಣದ ಗೇಟನ್ನು

ನಿರ್ಮಿಸುವುದು ರೂಢಿಗೆ ಬಂದಿರುವುದು ಪ್ರಸ್ತುತ ತಾಲೂಕಿನ ಹೆಚ್ಚಿನ ಕೆರೆಗಳಲ್ಲಿ ಕಬ್ಬಿನ ಗಟು ಅಥವಾ ತೂಬು ಇರುವುದು ಕಂಡುಬಂದಿವೆ. ಈ ಕೆರೆಯಲ್ಲಿನ ನೀರನ್ನು ಸಮರ್ಪಕವಾಗಿ ಹಂಚಲು ಒಬ್ಬ ನೀರು ಗಂಟಿಗನನ್ನು ನೇಮಕ ಮಾಡುತ್ತಿದ್ದರು. ಅವರು ಆ ಪ್ರದೇಶದ ಜನರಿಗೆ ಸಮಾನವಾಗಿ ನೀರನ್ನು ಹಂಚುವುದು ಅವನ ಕಾರ್ಯವಾಗಿತ್ತು. ಅವನಿಗೆ ಬೇಕಾದ ಸೌಲಭ್ಯವನ್ನು ಸರಕಾರ ನೋಡಿಕೊಳ್ಳುತ್ತದೆ.

ಕೆರೆಯ ನಿರ್ಮಾಣದ ಜೊತೆಗೆ ಅದಕ್ಕೆ ಹೊಂದಿಕೊಂಡಂತೆ ಏರಿಯನ್ನು ನಿರ್ಮಿಸುತ್ತಿದ್ದರು. ಏಕೆಂದರೆ ಕೆರೆಯಲ್ಲಿನ ನೀರು ಬೇರೆಡೆಗಡೆಗೆ ಹರಿದು ಹೋಗಬಾರದು ಎನ್ನುವ ಉದ್ದೇಶದಿಂದ ಏರಿಯ ನಿರ್ಮಾಣ ಮಾಡುತ್ತಿದ್ದರು. ಏರಿಯನ್ನು ಕಲ್ಲಿನಿಂದ ಹಾಗೂ ಮಣ್ಣಿನಿಂದ ನಿರ್ಮಿಸುತ್ತಿದ್ದರು. ಕೆರೆಗಳ ನಿರ್ಮಾಣದ ಕುರಿತು ಕರ್ನಾಟಕದ ಮಟ್ಟಿಗೆ ಹೇಳುವುದಾದರೆ ಅದರಲ್ಲಿ ಪ್ರಮುಖವಾಗಿ ಶಾತವಾಹನರು, ಕದಂಬರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಹೊಯ್ಸಳರು, ವಿಜಯನಗರ ಅರಸರ ಕಾಲದವರೆಗೆ ನೀರಾವರಿ ಕಾಮಗಾರಿಗಳು ಸುಮಾರು ವರ್ಷಗಳ ಕಾಲ ನಿರಂತರವಾಗಿ ನಡೆದು ಬಂದಿದೆ. ಕೆರೆಗಳ ನಿರ್ಮಾಣದ ಕುರಿತು ಹೊಯ್ಸಳರ ಕಾಲವನ್ನು ಸುವರ್ಣಯುಗವೆಂದು ಕರೆಯಲಾಗುತ್ತದೆ.

ಕಲಘಟಗಿ ತಾಲೂಕಿನಲ್ಲಿ ಸುಮಾರು ೩೯೦ ಕ್ಕೂ ಹೆಚ್ಚು ಸಣ್ಣ ಹಾಗೂ ದೊಡ್ಡ ಕೆರೆಗಳಿದ್ದು, ಆದರೆ ಅದರಲ್ಲಿ ಕೆಲವು ಕೆರೆಗಳ ಕುರಿತು ಶಾಸನದಲ್ಲಿ ಭೂಮಿದಾನ ಮಾಡಿದವರ ಹಾಗೂ ಕೆರೆ ನಿರ್ಮಾಣ ಮಾಡಲು ಸಹಾಯ ಮಾಡಿದವರ ಹೆಸರನ್ನು ಅದರಲ್ಲಿ ಉಲ್ಲೇಖಿಸಿರುವುದನ್ನು ಶಾಸನಾಧಾರಗಳಿಂದ ತಿಳಿದು ಬಂದಿದೆ. ಅವುಗಳಲ್ಲಿ ಕೆಲವು ಕೆರೆಗಳು ಪ್ರಾಚೀನ ಕಾಲದ ಕೆರೆಗಳಾಗಿವೆ ಅದೇರೀತಿ ಆಧುನಿಕ ಕಾಲದ ಕೆರೆಗಳು ಕಂಡು ಬಂದಿವೆ.

ಕೆರೆಗಳನ್ನು ಹೆಚ್ಚಿನ ರೀತಿಯಲ್ಲಿ ನಿರ್ಮಿಸುವುದಕ್ಕೆ ಪ್ರಮುಖ ಕಾರಣ ಆ ಪ್ರದೇಶದಲ್ಲಿ ಯಾವುದೇ ರೀತಿಯ ನದಿಗಳು ಇಲ್ಲದೇ ಇರುವುದರಿಂದ ಹಾಗೂ ಕೃಷಿಗೆ ಬಳಕೆಯಾಗಲೆಂದು, ಕುಡಿಯಲು ಉಪಯೋಗವಾಗಲೆಂದು ಇಂತಹ ಸಣ್ಣ ಹಾಗೂ ದೊಡ್ಡ ಕೆರೆಗಳನ್ನು ನಿರ್ಮಿಸುತ್ತಿದ್ದರು. ಇದರಿಂದ ಕೆರೆಗಳು ಹೆಚ್ಚಿನ ಮಹತ್ವವನ್ನು ಪಡೆದುಕೊಂಡಿವೆ. ಇಂದು ಅವು ವೈಜ್ಞಾನಿಕವಾಗಿ ಹೊಸರೂಪವನ್ನು ಪಡೆದುಕೊಂಡಿವೆ. ಪ್ರಸ್ತುತ ಕ್ಷೇತ್ರಕಾರ್ಯ ಅಧ್ಯಯನ ಸಂದರ್ಭದಲ್ಲಿ ಈ ಪರಿಸರದಲ್ಲಿ ಅತ್ಯಂತ ದೊಡ್ಡ ಹಾಗೂ ಸಣ್ಣ ಕೆರೆಗಳನ್ನು ಕಾಣಬಹುದು. ಅದರಲ್ಲಿ ಪ್ರಮುಖವಾಗಿ ದೇವಿಕೊಪ್ಪದ ಹಿರೇಕೆರೆಯು ಸುಮಾರು ೪೩೩ ಎಕರೆ ಜಲಾನಯನ ಪ್ರದೇಶದಲ್ಲಿ ಕೆರೆಯನ್ನು ನಿರ್ಮಾಣ ಮಾಡಿರುವುದು ಕಂಡು ಬಂದಿದೆ. ಈ ತಾಲೂಕಿನ ಎಲ್ಲಾ ಕೆರೆಗಳು ಮಳೆಯಾಶ್ರಿತ ಕೆರೆಗಳಾಗಿವೆ. ಎಂದು ಹೇಳಲಾಗಿದೆ.

ಈ ಕೆರೆಗಳಲ್ಲಿ ಕೆಲವು ಪ್ರಕಾರಗಳಿವೆ ಅವು ಹೀಗೆ ವಿಂಗಡಿಸಬಹುದು. ನದಿ ಆಶ್ರಿತಕೆರೆ, ಕೊಳವೆ ಬಾವಿಯನ್ನು ಅವಲಂಬಿಸಿರುವಕೆರೆ, ಸರಪಣಿಕೆರೆ, ಮಳೆಯಾಶ್ರಿತಕೆರೆ ಮುಂತಾದವುಗಳು ಇವುಗಳಲ್ಲಿ ಹೆಚ್ಚಿನವು ಮಳೆಯಾಶ್ರಿತ ಕೆರೆಗಳಾಗಿವೆ. ಈ ರೀತಿಯಾಗಿ ಕೆರೆಗಳ ನಿರ್ಮಾಣವನ್ನು ಮಾಡಿರುವುದು ಕಂಡು ಬಂದಿವೆ.

**ಕೆರೆಗಳ ರಚನಾ ವಿಧಾನ :**

ಪ್ರಸ್ತುತ ತಾಲೂಕಿನ ಪ್ರಮುಖ ಕೆರೆಗಳನ್ನು ನೋಡಿದಾಗ ಪ್ರತಿಯೊಂದನ್ನು ಒಂದೊಂದು ವಿಧಾನದಲ್ಲಿ ನಿರ್ಮಿಸಿರುವುದನ್ನು ಕಾಣಬಹುದಾಗಿದೆ. ಅವುಗಳೆಂದರೆ ವೃತ್ತಾಕಾರ, ಚೌಕಾಕಾರ, ಆಯತಾಕಾರ, ಗೋಲಾಕಾರ, ಅರ್ಧಚಂದ್ರಾಕಾರ, ಅರ್ಧವತ್ರುಲಾಕಾರವಾಗಿರುವ ಕೆರೆಗಳು ಇರುವುದು ಕಂಡು ಬಂದಿವೆ. ಉದಾ: ಮಡಕಿಹೊನ್ನಳ್ಳಿ ಗ್ರಾಮದ ಹೀರೆಕೆರೆಯು ಆಯತಾಕಾರವಾದ ಕೆರೆಯಾಗಿದ್ದು ಅದು ಅತ್ಯಂತ ಉದ್ದವಾದ ಕೆರೆಯಾಗಿದೆ. ಅದೇರೀತಿ ಸೋಮನಕೊಪ್ಪದ ತುಂಬಿಕೆರೆಯು ಚೌಕಾರಾರವಾದ ಕೆರೆಯಾಗಿದೆ ಹಾಗೂ ಅತ್ಯಂತ ಚಿಕ್ಕಕೆರೆಯಾಗಿದೆ. ಕೆರೆಯನ್ನು ನಿರ್ಮಾಣ ಮಾಡಿದ ನಂತರ ಅದಕ್ಕೆ ಒಂದು ಏರಿಯನ್ನು ನಿರ್ಮಾಣ ಮಾಡುತ್ತಾರೆ. ಏಕೆಂದರೆ ಕೆರೆಯ ನೀರು ಯಾವುದೇ ಸಮಯದಲ್ಲಿ ಹೊರಗೆ ಹೋಗಬಾರದೆಂದು ಹಾಗೂ ಅದನ್ನು ಕಲ್ಲು ಹಾಗೂ ಮಣ್ಣಿನಿಂದ ಏರಿಯ ನಿರ್ಮಾಣ ಮಾಡುತ್ತಾರೆ. ಏರಿಯನ್ನು ಯಾವಾಗಲು ನೇರವಾಗಿ ಕಟ್ಟದೇ ಅಂಕುಡೊಂಕಾಗಿ ಕಟ್ಟುತ್ತಿದ್ದರು. ಏಕೆಂದರೆ ಅದರಿಂದ ಕೆರೆಗೆ ನೀರಿನ ಹೊಡೆತ ಬೀಳಬಾರದೆಂದು ಇಂತಹ ಕಾರ್ಯವನ್ನು ಮಾಡುತ್ತಿದ್ದರು.

ಕೆರೆಗಳ ಕುರಿತು ಜಾನಪದರು ಕೆಲವು ಗಾದೆ ಹಾಗೂ ನಾಣ್ಣುಡಿಗಳನ್ನು ರಚಿಸಿರುವುದು ಅವು ಈ ರೀತಿಯಾಗಿವೆ. 'ಏರಿ ನಿಲ್ಲಿಸುವ ಕೆರೆ ಏರಿಯೇ ನೀರು ಕುಡಿದರೆ', 'ಹೊಲದ ಮೇರೆಗಳನ್ನು ಗುರುತಿಸಲು ಹಾಕಿದ ಬೇಲಿಯೇ ಹೊಲವನ್ನು ಮೇದರೆ', ಎಂಬ ಗಾದೆಯಂತೆ ಪ್ರಾಚೀನ ಕಾಲದಲ್ಲಿ ಕೆರೆ ರಚನೆ ಮಾಡಿರುವುದು ಕಂಡು ಬಂದಿವೆ.

ಕೆರೆಯ ಏರಿಯನ್ನು ಕಟ್ಟುವಾಗ ಅದಕ್ಕೆ ಮಣ್ಣನ್ನು ನೀರಿನಿಂದ ತೋಯಿಸಿ ಸರಿಯಾಗಿ ಹದಮಾಡಿ ಅದನ್ನು ಕಲ್ಲಿನೊಂದಿಗೆ ಹೊರಗಿನ ಭಾಗ ಮತ್ತು ಒಳಗಿನ ಭಾಗವನ್ನು ಗಟ್ಟಿಯಾಗಿ ಕಟ್ಟುತ್ತಿದ್ದರು. ಇದರಿಂದ ಯಾವ ಹಾನಿಯಾಗದಂತೆ ನೋಡಿಕೊಳ್ಳಬಹುದು ಎಂಬ ದೃಢವಾದ ನಂಬಿಕೆ ಅವರಲ್ಲಿತ್ತು. ಈ ರೀತಿಯಾಗಿ ಕೆರೆಗಳ ರಚನಾ ವಿಧಾನದಲ್ಲಿ ಪ್ರಮುಖವಾಗಿ ಕೆರೆಗಳ ನಿರ್ಮಾಣ ಇತರ ವಿಧಾನಗಳು ಸೂಕ್ತವಾಗಿವೆ. ಅವುಗಳಲ್ಲಿ ಕೆರೆಯ ಏರಿ, ತೂಬುಗಳ ರಚನೆ,

ಕಾಲುವೆ ವ್ಯವಸ್ಥೆ, ಕೋಡಿಗಳ ನಿರ್ಮಾಣ ಹಾಗೂ ಕಟ್ಟೆಯನ್ನು ಸಹ ನಿರ್ಮಿಸಿದ್ದಾರೆ. ಈ ಎಲ್ಲ ವಿಧಗಳಿಂದ ಕೆರೆಗಳನ್ನು ರಚನೆ ಮಾಡಬಹುದು ಹಾಗೂ ಕೆರೆಯನ್ನು ಎತ್ತರವಾದ ಪ್ರದೇಶದ ಕೆಳಗೆ ನಿರ್ಮಿಸಿರುವುದು ಕಂಡುಬರುತ್ತದೆ. ಏಕೆಂದರೆ ನೇರವಾಗಿ ನೀರು ಕೆರೆಗೆ ಸಂಗ್ರಹವಾಗುತ್ತದೆ ಎನ್ನುವ ಉದ್ದೇಶದಿಂದ ಈ ರೀತಿ ನಿರ್ಮಿಸುತ್ತಾರೆ.

**ತಾಂತ್ರಿಕತೆ**

ನೀರಾವರಿ ತಂತ್ರಜ್ಞಾನ ಕುರಿತಂತೆ ನಮ್ಮಲ್ಲಿ ಪ್ರತ್ಯೇಕವಾದ ಪ್ರಾಚೀನ ಲಿಖಿತ ಗ್ರಂಥಗಳಲ್ಲಿ ಉಲ್ಲೇಖವಿಲ್ಲ. ಹಾಗೆಂದಾಕ್ಷಣ ಕೆರೆಯ ತಾಂತ್ರಿಕ ವ್ಯವಸ್ಥೆಯ ಬಗ್ಗೆ ನಮ್ಮ ಪೂರ್ವಜರಿಗೆ ಅದರ ಬಗ್ಗೆ ತಿಳಿವಳಿಕೆ ಇದ್ದಿಲ್ಲವೆಂದಲ್ಲ, ಅವರಿಗೆ ಬರೆದಿಡುವ, ದಾಖಲಿಸುವ ಪರಿಪಾಠವಿರಲಿಲ್ಲ. ಭಾರತೀಯರ ಮೌಖಿಕ ಪರಂಪರೆಯ ಜ್ಞಾನ ತಲೆಮಾರಿನಿಂದ ತಲೆಮಾರಿಗೆ ಮೌಖಿಕವಾಗಿ ಹರಿದು ಬಂದ ಜ್ಞಾನವೇ ಅವರ ಬದುಕಿಗೆ ದಾರಿ ದೀಪವಾಗಿತ್ತು. ಅವರಿಗಿದ್ದ ನೀರಾವರಿ ತಂತ್ರಜ್ಞಾನದ ಕ್ರಮವನ್ನು ಅಳಿದುಳಿದ ಪ್ರಾಚೀನ ಕಾಲದ ಜಲಾಶಯಗಳಲ್ಲಿ ಇಂದಿಗೂ ಕಾಣಬಹುದು. ನಮ್ಮ ಪೂರ್ವಜರು ಹಾಗೂ ಸೂಕ್ಷ್ಮಜೀವಿಗಳು ಕೆರೆಯನ್ನು ವ್ಯವಸ್ಥಿತವಾಗಿ ಕಟ್ಟುವುದರಲ್ಲಿ ಪರಿಣಿತಿಯನ್ನು ಹೊಂದಿದ್ದರು. ಕೆರೆಯನ್ನು ಸರಪಣಿ ವ್ಯವಸ್ಥೆಯಲ್ಲಿ ಕಟ್ಟಿರುವುದು, ಏರಿಯನ್ನು ಡೊಂಕಾಗಿ ಕಟ್ಟಿರುವುದು, ಅವುಗಳ ತೂಬು, ಕೋಡಿಯ ವಿನ್ಯಾಸವನ್ನು ಸ್ಪಷ್ಟವಾಗಿ ಕಾಣಬಹುದು. ಅಷ್ಟೇ ಏಕೆ? ಕೆರೆ ನಿರ್ಮಾಣ ಆಯ್ಕೆಯಲ್ಲಿ ತೋರಿಸಿರುವ ಜಾಣ್ಮೆ ಇಂದಿಗೂ ಅವಿಸ್ಮರಣೀಯ. ಕೆರೆಯ ತಂತ್ರಜ್ಞಾನದ ವಿಷಯದಲ್ಲಿ ದಕ್ಷಿಣ ಭಾರತದ ರಾಜ ವಂಶಗಳು ಹೆಚ್ಚು ಪರಿಣಿತರಾಗಿದ್ದಾರೆಂಬುದಕ್ಕೆ ಆಂದ್ರ ಪ್ರದೇಶದ ಕಡಪಾ ಜಿಲ್ಲೆಯ ಪೊರಮಾಮಿಲ್ಲ ಶಾಸನವೇ ಸಾಕ್ಷಿ. ಪ್ರಾಚೀನ ಕಾಲದ ಅರಸರು ನಿರ್ಮಿಸಿದ ಅನೇಕ ಕೆರೆಗಳು ಈಗಲೂ ಬಳಕೆಯಲ್ಲಿವೆ. ಅವರಿಗಿದ್ದ ನೀರಾವರಿ ತಂತ್ರಜ್ಞಾನಕ್ಕೆ ಸ್ಪಷ್ಟ ಆಧಾರ ಕಲಘಟಗಿ ತಾಲೂಕಿನ ಕೆರೆಯ ಕುರಿತು ಶಾಸನಗಳು ಲಭ್ಯ ಇವೆ. ಕೆರೆಗಳ ರಚನೆಯಲ್ಲಿ ಬಹುಮುಖ್ಯವಾದ ಅಂಗಗಳ ರಚನೆಯಲ್ಲಿ ಬಳಸಿದ ತಾಂತ್ರಿತೆ ಕುರಿತು ಹೀಗೆ ಕೆಳಗಿನಂತೆ ನೋಡಬಹುದು.

**ಜಲಾನಯನ ಪ್ರದೇಶ :**

ಜಲಾನಯನ ಪ್ರದೇಶವು ಕೆಲವೊಂದು ಸ್ಥಳಗಳಲ್ಲಿ ಭಿನ್ನವಾಗಿರುತ್ತವೆ. ಅಂದರೆ ಕೆರೆಗಳ ರಚನೆಯ ವಿಸ್ತಾರದಲ್ಲಿ ಹೆಚ್ಚು ಕಡಿಮೆಯಾಗಿರುತ್ತದೆ. ಅದರಲ್ಲಿ ಕರ್ನಾಟಕವನ್ನು ಕುರಿತು ಅಧ್ಯಯನವನ್ನು ಮಾಡಿದರ ಕುರಿತು ಕೆಲ;ವು ಉಲ್ಲೇಖಗಳ ಪ್ರಕಾರ ೨೦,೦೦೦ ಎಕರೆ ಜಲಾನಯನವನ್ನು ಹೊಂದಿದ ಪ್ರದೇಶ ಅದೇರೀತಿ ೧೦,೦೦೦ ಎಕರೆ, ೧,೦೦೦ ಎಕರೆ

ಹಾಗೆಯೇ ಪ್ರಸ್ತುತ ತಾಲೂಕಿನಲ್ಲಿ ಸುಮಾರು ೪೩೩ ಎಕರೆ ಜಲಾನಯನ ಪ್ರದೇಶ ಹೊಂದಿದ ಕೆರೆಯನ್ನು ನೋಡಬಹುದಾಗಿದೆ. ಕೆರೆಗಳಿಗೆ ಎತ್ತರ ಪ್ರದೇಶದಿಂದ ನೀರು ಕಾಲುವೆ ಮುಖಾಂತರ ಬಂದು ಸಂಗ್ರಹವಾಗುವ ಪ್ರದೇಶವನ್ನು ಜಲಾನಯನ ಪ್ರದೇಶವೆಂದು ಕರೆಯುತ್ತಾರೆ. ಇಂತಹ ಒಂದು ವಿಧಾನವನ್ನು ತಾಲೂಕಿನ ಪ್ರಮುಖ ಕೆರೆಗಳಲ್ಲಿ ನೋಡಬಹುದಾಗಿದೆ. ಉದಾಹರಣೆಗೆ ಕಲಘಟಗಿ ತಾಲೂಕಿನ ಕಾಮಧೇನು ಗ್ರಾಮದಲ್ಲಿ ಕಾಡು ಹಾಗೂ ಗುಡ್ಡಗಳಿಂದ ಕೆರೆಗೆ ನೀರು ಬಂದು ಸಂಗ್ರಹವಾಗುತ್ತದೆ. ಆದ್ದರಿಂದ ಈ ಕೆರೆಯನ್ನು ಜಲಾನಯನ ಪ್ರದೇಶವೆಂದು ಕರೆಯಬಹುದಾಗಿದೆ. ಕೆರೆಯನ್ನು ತಲುಪುವ ನೀರಿನ ಪ್ರಮಾಣವನ್ನು ಜಲಾನಯನ ಪ್ರದೇಶಕ್ಕೂ ಅಲ್ಲಿ ಬಿಳುವ ಮಳೆಯ ಪ್ರಮಾಣಕ್ಕೂ ಸಂಬಂಧವಿರುತ್ತದೆ.

**ಕೆರೆಯ ಅಂಗಳ :**

ಕೆರೆಗೆ ಅಡ್ಡಲಾಗಿ ಏರಿಯನ್ನು ಕಟ್ಟಿದಾಗ ಅದರ ಹಿಂದೆ ನೀರು ಸಂಗ್ರಹವಾಗುವ ಅಂಗಣ ಪ್ರದೇಶವನ್ನು ಅಂಗಳ ಎಂದು ಕರೆಯುತ್ತಾರೆ. ಕೆರೆಯ ಅಂಗಳ ಜಿಗುಟಾಗಿದ್ದರೆ ಒಳಿತು ಅದು ಯಾವ ಕಾಲದಲ್ಲೂ ಅಥವಾ ಸಮಯದಲ್ಲೂ ಸೋರಿಹೋಗಬಾರದು ಮತ್ತು ಅಂಗಳವೇ ನೀರು ಇಂಗಬಾರದು ಅಂಗಳಲ್ಲಿ ಅಲ್ಲಲ್ಲಿ ದಿಬ್ಬಗಳಿರಬಾರದು ಈ ಪ್ರದೇಶದಲ್ಲಿ ಎಷ್ಟು ನೀರಿನ ಹರವು ಇರುತ್ತದೆ ಅಂತಹುದನ್ನು ಕೆರೆಯ ಅಂಗಳವೆನ್ನಬಹುದು.ಸ

**ಅಚ್ಚುಕಟ್ಟು ಅಥವಾ ಆಯಕಟ್ಟು ಪ್ರದೇಶ :**

ಕೆರೆ, ಕಾಲುವೆ ಮುಂತಾದವುಗಳ ಆಸರೆಯಲ್ಲಿರುವ ಭೂಮಿಯನ್ನು ಕೃಷಿಗೆ ಅನುಕೂಲವಾಗಲೆಂದು ವಿಂಗಡಿಸಿದ ಜಮೀನು ಹಾಗೂ ಜಲಾಶಯದ ಆಸರೆಯಲ್ಲಿ ಬೆಳೆಯುವ ಜಮೀನಿನ ಒಟ್ಟು ವಿಸ್ತಾರವನ್ನು ಅಚ್ಚುಕಟ್ಟು ಪ್ರದೇಶ ಹಾಗೂ ಆಯಕಟ್ಟು ಪ್ರದೇಶ ಎಂದು ಕರೆಯಲಾಗುತ್ತದೆ. ಬೇಸಾಯ ಮಾಡುವ ಪ್ರದೇಶವನ್ನು ಆಯಕಟ್ಟು ಎನ್ನುವರು.

**ಕೆರೆಯ ಏರಿ :**

ಏರಿಯು ಕೆರೆಯ ಒಂದು ಭಾಗವಾಗಿದೆ. ಇದು ನೀರನ್ನು ಆಯಕಟ್ಟಿನ ಭಾಗಕ್ಕೆ ಹರಿದು ಹೋಗಬಾರದೆಂದು ಕೆರೆಯಲ್ಲಿ ಏರಿಯನ್ನು ನಿರ್ಮಾಣ ಮಾಡುತ್ತಾರೆ. ಕಲಘಟಗಿ ತಾಲೂಕಿನ ಪ್ರಮುಖ ಕೆರೆಗಳ ಕುರಿತು ಕ್ಷೇತ್ರಾಧ್ಯನ ಮಾಡುವ ಸಮಯದಲ್ಲಿ ಕಂಡು ಬಂದ ಮಾಹಿತಿ ಪ್ರಕಾರ ಈ ಪ್ರದೇಶದಲ್ಲಿ ಪ್ರತಿಯೊಂದು ಹಳ್ಳಿಯಲ್ಲಿರುವ ಕೆರೆಗೆ ಏರಿಗಳ ನಿರ್ಮಾಣ ಇದ್ದೆ ಇರುತ್ತದೆ. ಅವು ಯಾವ ರೂಪದಲ್ಲಿ, ಆಕರದಲ್ಲಿ, ಶೈಲಿಯಲ್ಲಿ, ವಿದಧಲ್ಲಿರುತ್ತವೆ ಎಂಬುದನ್ನು ತಿಳಿದುಕೊಳ್ಳಬಹುದಾಗಿದೆ. ಯಾರ ಮಾರ್ಗದರ್ಶನದಲ್ಲಿ ಏರಿ ನಿರ್ಮಾಣದ ಕಾರ್ಯವನ್ನು

ಕೈಗೊಳ್ಳುತ್ತಾರೆ ಮತ್ತು ಅದನ್ನು ಕಟ್ಟಲು ಯಾವ ವಿಧಾನವನ್ನು ಉಪಯೋಗಿಸುತ್ತಾರೆ. ಹಾಗೂ ಏರಿಯನ್ನು ಹೇಗೆ ನಿರ್ಮಾಣ ಮಾಡಬೇಕು ಎಂಬುದನ್ನು ಈ ಅಧ್ಯಯನದಲ್ಲಿ ಕಂಡುಕೊಳ್ಳಬಹುದಾಗಿದೆ.

ಕೆರೆಯನ್ನು ಯಾವ ಪ್ರಮಾಣದಲ್ಲಿ ನಿರ್ಮಿಸುತ್ತಾರೋ ಅದರ ಆಧಾರದ ಮೇಲೆ ಏರಿಯ ನಿರ್ಮಾಣ ಮಾಡುತ್ತಾರೆ. ಏಕೆಂದರೆ ಕೆರೆಯು ದೊಡ್ಡದಿದ್ದು, ಅದರ ಏರಿಯು ಚಿಕ್ಕದಾಗಿ ನಿರ್ಮಾಣ ಮಾಡಿದರೆ, ಅದಕ್ಕೆ ಕೆರೆಯ ಪ್ರಮಾಣದಲ್ಲಿ ಏರಿಯ ನಿರ್ಮಾಣ ಮಾಡಿರುವುದು ಕಂಡು ಬಂದಿವೆ. ಕೆಲವೊಂದು ಕೆರೆಯ ಏರಿಯು ಒಂದು ಕಿ.ಮೀಗಿಂತ ಹೆಚ್ಚಿನ ಉದ್ದವಾದ ಏರಿಯನ್ನು ನೋಡಬಹುದಾಗಿದೆ. ಉದಾಹರಣೆಗೆ: ದೇವಿಕೊಪ್ಪ ಹಾಗೂ ಮಡಕಿಹೊನ್ನಳ್ಳಿ ಗ್ರಾಮದಲ್ಲಿ ೧೫೦೦, ಮೀ ಉದ್ದವಿರುವ ಏರಿಯನ್ನು ನಿರ್ಮಿಸಿರುವುದು ಕಂಡು ಬಂದಿದೆ. ಅದೇರೀತಿ ಸಣ್ಣ ಪ್ರಮಾಣದ ಏರಿ ನಿರ್ಮಿಸಿರುವುದನ್ನು ಕಾಣಬಹುದಾಗಿದೆ. ಉದಾಹರಣೆಗೆ: ಸೋಮನಕೊಪ್ಪದ ತುಂಬಿಕೆರೆಗೆ ೩೦೦ ಮೀ. ಉದ್ದವಿರುವ ಏರಿ ಇದೆ. ಈ ಒಂದು ಪದ್ದತಿ ತಾಲೂಕಿನಲ್ಲಿ ಕಂಡುಬರುತ್ತದೆ.

ಕೆರೆಯ ಏರಿಯನ್ನು ಮಣ್ಣು ಮತ್ತು ಕಲ್ಲಿನಿಂದ ಕಟ್ಟುತ್ತಾರೆ. ಕೆರೆಯನ್ನು ಕಟ್ಟುವುದರಲ್ಲಿ ಅನುಭವವಿರುವವರನ್ನು ಅಥವಾ ಇಂಜಿನಿಯರಗಳನ್ನು ಮಾತ್ರ ಈ ಕೆಲಸದಲ್ಲಿ ತೊಡಗಿಸಿಕೊಳ್ಳಲಾಗುತ್ತದೆ. ಏಕೆಂದರೆ ಅವರಿಗೆ ಅದರ ಬಗ್ಗೆ ಸಂಪೂರ್ಣ ಮಾಹಿತಿ ಇರುತ್ತದೆ. ಆದ್ದರಿಂದ ಏರಿಗೆ ಯಾವ ಹಾನಿಯಾಗದಂತೆ ಕಲ್ಲು ಹಾಗೂ ಮಣ್ಣನ್ನು ಹಾಕಿ ಅದನ್ನು ಗಟ್ಟಿಮಾಡುತ್ತಾರೆ. ಕೆರೆಯಲ್ಲಿ ಮಳೆಯ ನೀರಿನ ಪ್ರಮಾಣ ಹೆಚ್ಚಾದಾಗ ಕೆರೆಯ ಏರಿ ಒಡೆಯುವ ಸಾದ್ಯತೆ ಇರುತ್ತದೆ ಇದರ ನಿರ್ಮಾಣಕ್ಕೆ ಇಂಜಿನಿಯರಗಳ ಅವಶ್ಯಕತೆ ಇರುತ್ತದೆ. ಏಕೆಂದರೆ ಅವರು ಅದರ ಬಗ್ಗೆ ಆಳವಾದ ಅಧ್ಯಯನ ಮಾಡಿರುವವರಾಗಿರುತ್ತಾರೆ.

ಕೆರೆಯ ಏರಿಯನ್ನು ಗಟ್ಟಿಯಾಗಿ ಕಟ್ಟಬೇಕು. ಅದನ್ನು ದೊಡ್ಡ-ದೊಡ್ಡ ಕಲ್ಲು ಹಾಗೂ ಮಣ್ಣನ್ನು ನೀರನಲ್ಲಿ ನೆನಸಿ ಅದನ್ನು ಹದವಾಗುವಂತೆ ಮಾಡಿ ಅದನ್ನು ಕಲ್ಲಿನೊಂದಿಗೆ ಬೆರಸಿ ಒಳ ಮತ್ತು ಹೊರ ಭಾಗದಲ್ಲಿ ಹಾಕಿ ನಿರ್ಮಿಸಬೇಕು. ಕೆರೆಯ ಏರಿಗೆ ಮಣ್ಣನ್ನು ಕೆರೆಯ ತಳದಲ್ಲಿರುವ ಮಣ್ಣನ್ನು ತೆಗೆದುಕೊಳ್ಳಬೇಕಾಗುತ್ತದೆ. ಏರಿಯನ್ನು ತಳಭಾಗದಲ್ಲಿ ಬಹಳ ಅಗಲವಾಗಿ ಕಟ್ಟುತ್ತಾ ಬರುತ್ತಾರೆ ನಂತರ ಅದು ಮೇಲೆ ಹೋದಂತೆ ಅದರ ಪ್ರಮಾಣವನ್ನು ಕಡಿಮೆ ಮಾಡುತ್ತಾ ಬರುತ್ತಾರೆ. ಕೆರೆಯ ಒಳ ಪಾರ್ಶ್ವದಲ್ಲಿ ಸಾಮಾನ್ಯವಾಗಿ ಕಲ್ಲಿನಿಂದ ನಿರ್ಮಿಸಿರುತ್ತಾರೆ. ಅದೇರೀತಿ ಹೊರ ಪಾರ್ಶ್ವವನ್ನು ಮಣ್ಣಿನಿಂದ ಕಟ್ಟಿರುವುದು ಕಂಡುಬರುತ್ತದೆ. ಈ ರೀತಿ ನಿರ್ಮಿಸುವುದರಿಂದ ಕೆರೆಯ ಏರಿಗೆ ಹಾಗೂ ಮಣ್ಣಿನ ಕೊರತೆಯನ್ನು ಸಾಕಷ್ಟು ಮಟ್ಟಿಗೆ ತಡೆಯುತ್ತದೆ. ಇದರಿಂದ

ಯಾವುದೇ ರೀತಿಯ ಧಕ್ಕೆಯಾಗುವುದಿಲ್ಲ. ನೀರಿನ ಒತ್ತಡವನ್ನು ವಿರುದ್ದ ದಿಕ್ಕಿನಿಂದ ತಡೆದು ಸಾಕಷ್ಟು ಬಲವನ್ನು ಕೊಡುವಲ್ಲಿ ಸಹಾಯಕವಾಗುತ್ತದೆ.

ಪ್ರಸ್ತುತ ಅಧ್ಯಯನದಲ್ಲಿ ಕೆರೆಯ ಏರಿಯನ್ನು ಗಮನಿಸಿದಾಗ ಅವು ಒಂದೇ ರೀತಿಯಾಗಿರದೇ ಬೇರೆ ಬೇರೆ ರಚನಾ ಶೈಲಿಯನ್ನು ಹೊಂದಿದ್ದು ಕಂಡು ಬಂದಿದೆ. ಏರಿಯನ್ನು ಯಾವಾಗಲೂ ನೇರವಾಗಿ ಕಟ್ಟದೇ ಅಂಕುಡೊಂಕಾಗಿ ಅದರ ನಿರ್ಮಾಣ ಮಾಡುತ್ತಾರೆ. ಏಕೆಂದರೆ ನೀರಿನಿಂದ ಏರಿಗೆ ಬೀಳುವ ಒತ್ತಡವು ಸಮನಾಗಿ ಹಂಚಿಹೊಗುತ್ತದೆ. ಏರಿಯು ಒಡೆದಲ್ಲಿ ಅದನ್ನು ಸುಲಭವಾಗಿ ಕಟ್ಟಬಹುದು ಎನ್ನುವ ಉದ್ದೇಶದಿಂದ ಈ ರೀತಿ ರಚನಾ ಕ್ರಮವನ್ನು ಅಳವಡಿಸಿಕೊಂಡಿದ್ದಾರೆ. ಇದು ವೈಜ್ಞಾನಿಕವಾಗಿ ಮಹತ್ವವನ್ನು ಪಡೆದುಕೊಂಡಿದೆ.

**ತೂಬುಗಳ ರಚನೆ**

ತೂಬುಗಳು ಕೆರೆಯ ಒಂದು ಅವಿಭಾಜ್ಯ ಅಂಗ. ಇವುಗಳ ರಚನೆ ಒಂದೊಂದು ಪ್ರದೇಶದಲ್ಲಿ ಭಿನ್ನವಾಗಿರುವುದು ಕಂಡು ಬಂದಿದೆ. ಪ್ರಸ್ತುತ ತಾಲೂಕಿನಲ್ಲಿ ಇವುಗಳ ರಚನೆಯನ್ನು ನೋಡಿದಾಗ ಇಲ್ಲಿ ಪ್ರಮುಖವಾಗಿ ಕಬ್ಬಿಣದ ಬಾಗಿಲುಗಳು ಹಾಗೂ ಕಬ್ಬಿಣದ ತೂಬುಗಳ ಪ್ರಮಾಣ ಹೆಚ್ಚಾಗಿ ಕಂಡು ಬಂದಿದೆ. ತೂಬನ್ನು ಕೆರೆಯಲ್ಲಿನ ನೀರಿನ ಪ್ರಮಾಣ ಕಡಿಮೆಯಾಗದಿರಲೆಂದು ಅಥವಾ ನೀರು ಕೆರೆಯಿಂದ ಹೊರಗೆ ಹೊಗದಿರಲೆಂದು ತೂಬುಗಳ ರಚನೆ ಅನಿವಾರ್ಯವಾಗಿತ್ತು. ಆದ್ದರಿಂದ ತೂಬುಗಳನ್ನು ಕೆರೆಯ ರಚನೆಯ ಮೇಲೆ ಇವುಗಳನ್ನು ನಿರ್ಮಾಣ ಮಾಡಲಾಗುತ್ತಿತ್ತು. ತಾಲೂಕಿನ ಕ್ಷೇತ್ರಾಧ್ಯಯನ ಸಂದರ್ಭದಲ್ಲಿ ಕಂಡುಬಂದ ತೂಬುಗಳ ಪ್ರಕಾರ ಕೆಲವೊಂದನ್ನು ದೊಡ್ಡ ದೊಡ್ಡ ಕಲ್ಲುಗಳಿಂದ ಒಂದು ಕೆರೆಯಲ್ಲಿ ಎರಡು ಉದ್ದ ಹಾಗೂ ದಪ್ಪವಾದ ಕಲ್ಲನ್ನು ಇಡುತ್ತಿದ್ದರು. ನಂತರ ಅದರ ಮೇಲೆ ಅಷ್ಟೇ ಪ್ರಮಾಣದ ಉದ್ದವಾದ ಕಲ್ಲನ್ನು ಇಟ್ಟು ತೂಬಿನ ರಚನೆ ಮಾಡುತ್ತಿದ್ದರು. ಅದೇರೀತಿ ಅವುಗಳ ಮೇಲೆ ಕಟ್ಟಿಗೆಯ ತುಂಡನ್ನು ಇಡುವುದು ಒಂದು ಕ್ರಮವಾಗಿತ್ತು. ಕೆಲವೊಂದು ಪ್ರದೇಶದಲ್ಲಿ ಈ ಕ್ರಮ ರೂಢಿಯಲ್ಲಿತ್ತು. ಮತ್ತೆ ಕೆಲವು ಬೃಹತ್ತಾದ ಕೆರೆಗಳಲ್ಲಿ ಒಂದು, ಎರಡು, ಮೂರು, ನಾಲ್ಕು ಈ ರೀತಿಯ ತೂಬುಗಳನ್ನು ನಿರ್ಮಿಸುತ್ತಿದ್ದರು. ಉದಾಹರಣೆಗೆ: ಕಲಘಟಗಿ ಪರಿಸರದ ಹೀರೆಹೊನ್ನಳ್ಳಿ ಹಾಗೂ ಬ್ಲಂಡರಗಟ್ಟಿ, ಕಾಮಧೇನು, ಉಗ್ಗಿನಕೆರಿ, ಗಂಜಿಗಟ್ಟಿಕೆರೆ ಗ್ರಾಮದಲ್ಲಿ ಒಂದೊಂದು ತೂಬು ಇವೆ ಮತ್ತು ಅವುಗಳ ರಚನಾ ಶೈಲಿ ಉದ್ದವಾಗಿದೆ. ಇವುಗಳನ್ನು ಕಲ್ಲಿನಿಂದ ನಿರ್ಮಿಸಿರುವುದು ಕಂಡುಬಂದಿದೆ. ಮತ್ತೆ ಕೆಲವು ಪ್ರದೇಶದಲ್ಲಿ ಎರಡು ತೂಬುಗಳ ನಿರ್ಮಾಣ ಮಾಡಿರುವುದು. ಉದಾಹರಣೆಗೆ: ದೇವಿಕೊಪ್ಪದ ಹಿರೆಕೆರೆಯಲ್ಲಿ, ಸಂಗಮೇಶ್ವರದ ಹೊಸಕೆರೆಯಲ್ಲಿ, ಸೋಮನಕೊಪ್ಪದ ತೋಪಿನಕೆರೆಯಲ್ಲಿ ಎರಡು ತೂಬುಗಳು ಇರುವುದು ಕಂಡುಬಂದಿವೆ. ಈ ಪರಿಸರದಲ್ಲಿ ಕಲ್ಲಿನ

ಕಟ್ಟಡದ ಮೇಲೆ ಕಬ್ಬಿನ ರಚನೆಯ ತೂಬು ಕಂಡುಬಂದಿವೆ. ಈ ಎರಡು ವ್ಯಾಸದ ಮೇಲೆ ೨೫. ಸೆ.ಮೀ ವ್ಯಾಸದ ರಂಧ್ರವನ್ನು ಮುಚ್ಚಲಾಗುತ್ತಿತ್ತು. ಅದರಲ್ಲಿರುವ ದಿಮ್ಮಿಯನ್ನು ಮೇಲಕ್ಕೆತ್ತಿದಾಗ ನೀರು ಕಾಲುವೆ ಮುಖಾಂತರ ಹರಿದು ಬಂದು ಆಯಕಟ್ಟಿನ ಪ್ರದೇಶಕ್ಕೆ ಹೋಗುತ್ತದೆ.

ಕಲಘಟಗಿ ಪರಿಸರದಲ್ಲಿ ಗಜಲಕ್ಷ್ಮೀ ಶಿಲ್ಪವಿರುವ ತೂಬು ಯಾವ ಪ್ರದೇಶದಲ್ಲೂ ಕಂಡು ಬಂದಿಲ್ಲ. ಆದರೆ ಇಲ್ಲಿ ವಿಶೇಷವೆಂದರೆ ತೂಬಿನ ರಚನೆಯಲ್ಲಿ ಒಂದಾದ ವೃತ್ತಾಕಾರದ ತೂಬು ಇರುವುದು ಕಂಡು ಬಂದಿದೆ. ಉದಾಹರಣೆಗೆ: ಉಗ್ಗಿನಕೆರೆ ಗ್ರಾಮದಲ್ಲಿ ಈ ರೀತಿಯ ತೂಬು ಇದೆ. ತೂಬುಗಳನ್ನು ಕಾಲುವೆಗೆ ಅನುಗುಣವಾಗಿ ನಿರ್ಮಾಣ ಮಾಡುತ್ತಾರೆ. ಏಕೆಂದರೆ ನೀರಿನ ಪ್ರಮಾಣ ಹೆಚ್ಚಾದಾಗ ಆ ರಂಧ್ರದ ಭಾಗದಲ್ಲಿರು ಕಟ್ಟಿಗೆ ಅಥವಾ ಕಬ್ಬಿಣದ ಬಾಗಿಲನ್ನು ತೆಗೆದಾಗ ನೀರು ಸಹಜವಾಗಿ ಕಾಲುವೆ ಮುಖಾಂತರ ಹೊರಗಡೆ ಹೋಗುತ್ತದೆ. ಅವುಗಳನ್ನು ವಿವಿಧ ಎತ್ತರಗಳಲ್ಲಿ ಅಳವಡಿಸಲಾಗುತ್ತದೆ. ಕೆರೆಯ ವಿಸ್ತಾರ, ನೀರಿನ ಸಾಮರ್ಥ್ಯವನ್ನು ಗಮನದಲ್ಲಿಟ್ಟುಕೊಂಡು ತೂಬುಗಳ ರಚನೆ ಮಾಡಲಾಗುತ್ತದೆ. ಸಾಮಾನ್ಯವಾಗಿ ಹೆಚ್ಚಾಗಿ ಕೆರೆಯ ಏರಿಯ ಮೇಲೆ ತೂಬುಗಳನ್ನು ರಚನೆ ಮಾಡುತ್ತಾರೆ. ಇದರಿಂದ ಕೆರೆಗೆ ಯಾವ ಅಪಾಯವಾಗುವುದಿಲ್ಲ. ಪ್ರಸ್ತುತ ಅಧ್ಯಯನದಲ್ಲಿ ಪ್ರಮುಖವಾಗಿ ಕೆರೆಯ ಏರಿಯ ಮೇಲೆ ಹೆಚ್ಚಾಗಿ ಕಂಡುಬರುತ್ತವೆ. ಕೆರೆಯ ನೀರನ್ನು ಆಯಕಟ್ಟಿನ ಪ್ರದೇಶಕ್ಕೆ ಹಾಯಿಸಬೇಕೆಂದಾಗ ಅವುಗಳ ಮೇಲಿರುವ ಕಬ್ಬಿಣದ ಹಾಗೂ ಮರದ ತುಂಡನ್ನು ನೀರನ್ನು ಹಾಯಿಸುವುದು ಕಂಡುಬಂದಿದೆ. ಈ ಒಂದು ವ್ಯವಸ್ಥೆ ತಾಲೂಕಿನಲ್ಲಿ ಕಂಡು ಬಂದಿದೆ.

**ಕಾಲುವೆ ವ್ಯವಸ್ಥೆ**

ಕಾಲುವೆ ವ್ಯವಸ್ಥೆ ಕೆರೆಯ ಇನ್ನೊಂದು ಭಾಗವಾಗಿದೆ. ಯಾವುದೇ ಒಂದು ಕೆರೆ, ಹಳ್ಳ, ಕೊಳ್ಳ, ನದಿಯನ್ನು ನಿರ್ಮಿಸಬೇಕೆಂದರೆ ಅದಕ್ಕೆ ಪೂರಕವಾದ ಸ್ಥಳದಿಂದ ನೀರು ಬರುವ ಜಾಗದಿಂದ ಈ ಒಂದು ವ್ಯವಸ್ಥೆಯನ್ನು ಕೈಗೊಳ್ಳಲಾಗುತ್ತದೆ. ಅದು ಯಾವ ಪ್ರಮಾಣದಲ್ಲಿ ಇದಕ್ಕೆ ನೀರು ಬಂದು ಸೇರುತ್ತದೆ ಎಂಬ ಉದ್ದೇಶದಿಂದ ಇಂತಹ ವ್ಯವಸ್ಥೆಯನ್ನು ಮಾಡಲಾಗುತ್ತಿತ್ತು. ಪ್ರಸ್ತುತ ಅಧ್ಯಯನದಲ್ಲಿ ಕಾಲುವೆಯನ್ನು ಕೆರೆಗೆ ಹೊಂದಿಕೊಂಡಂತೆ ನಿರ್ಮಿಸಲಾಗಿದೆ. ಏಕೆಂದರೆ ಇದರ ಮೂಲಕ ಕೆರೆಗೆ ನೀರು ಬಂದು ಸಂಗ್ರಹವಾಗುತ್ತದೆ. ಕಲಘಟಗಿ ಪರಿಸರವು ಮಲೆನಾಡು ಹಾಗೂ ಅರೇಮಲೆನಾಡು ಪ್ರದೇಶವಾಗಿದ್ದರಿಂದ ಈ ಸ್ಥಳದಲ್ಲಿ ಮಳೆಯ ಪ್ರಮಾಣ ಹೆಚ್ಚಾಗಿರುತ್ತದೆ. ಆದ್ದರಿಂದ ಕಾಲುವೆಗಳ ವ್ಯವಸ್ಥೆ ಅನಿವಾರ್ಯ ಎಂದು ಹೇಳಬಹುದು ಇದರಿಂದ ಕೆರೆಗೆ ನೀರು ಕಾಲುವೆ ಮುಖಾಂತರ ಬಂದು ಸೇರುತ್ತದೆ. ಎನ್ನುವ ಉದ್ದೇಶದಿಂದ ಈ ಒಂದು ವ್ಯವಸ್ಥೆಯನ್ನು ರೂಪಿಸಲಾಗಿದೆ. ಪ್ರತಿ ಕೆರೆಯ ಪ್ರಮಾಣದ ಆಧಾರದ ಮೇಲೆ ಆ ಸ್ಥಳದಲ್ಲಿ ಒಂದು ಎರಡು

ಹಾಗೂ ಕೆಲವೊಂದು ಕೆರೆಯಲ್ಲಿ ನಾಲ್ಕು ಕಾಲುವೆಗಳನ್ನು ನಿರ್ಮಿಸಿರುವುದು ಕಂಡುಬಂದಿದೆ. ಉದಾಹರಣೆಗೆ ಕಲಘಟಗಿ ಪರಿಸರದಲ್ಲಿ ಹೆಚ್ಚಾಗಿ ಎರಡು ಕಾಲುವೆ ಇರುವುದು ಕಂಡುಬಂದಿದೆ. ಕಾಲುವೆಯ ರಚನೆಯನ್ನು ಕಲ್ಲು ಹಾಗೂ ಮರಳಿನಿಂದ ಕಟ್ಟುತ್ತಿದ್ದರು ಅದೇರೀತಿ ಇವು ಪ್ರಮಾಣದಲ್ಲಿ ಉದ್ದವಾಗಿತ್ತವೆ ಎಂದು ತಿಳಿದುಬಂದಿದೆ. ಈ ವ್ಯವಸ್ಥೆ ಮುಖಾಂತರ ಆಯಕಟ್ಟಿನ ಪ್ರದೇಶಗಳಿಗೆ ನೀರನ್ನು ಹರಿಸಲಾಗುತ್ತದೆ. ಕಾಲುವೆ ನಿರ್ಮಾಣದ ಕುರಿತು ವಿಜಯನಗರ ಅರಸರ ಕಾಲದಲ್ಲಿ ತುಂಬಾ ವ್ಯವಸ್ಥಿತವಾಗಿ ಕಾಲುವೆ ನಿರ್ಮಾಣ ಮಾಡಿರುವುದು ಕಂಡುಬಂದಿದೆ ಎಂದು ಹೇಳಲಾಗಿದೆ.

**ಕೋಡಿಗಳು**

ಕೋಡಿಯು ಕೆರೆಯ ಮುಖ್ಯವಾದ ಒಂದು ಭಾಗವಾಗಿದೆ. ಇವುಗಳನ್ನು ಕೆರೆಯ ತುದಿಗಳಲ್ಲಿ ನಿರ್ಮಿಸುತ್ತಿದ್ದರು. ಕೆರೆಯ ವಿಸ್ತಾರದ ಪ್ರಮಾಣವನ್ನು ನೋಡಿಕೊಂಡು ಇವುಗಳನ್ನು ರಚನೆ ಮಾಡಿಸುತ್ತಿದ್ದರು. ಏಕೆಂದರೆ ಕೆರೆ ದೊಡ್ಡದಾಗಿದ್ದು ಅದೇ ಪ್ರಮಾಣದಲ್ಲಿ ಕೋಡಿಯನ್ನು ನಿರ್ಮಿಸಬೇಕು. ಇಲ್ಲದಿದ್ದರೆ ಕೆರೆಯ ಏರಿ ಒಡೆದು ಆಯಕಟ್ಟಿನ ಪ್ರದೇಶದಲ್ಲಿರುವ ಗದ್ದೆ, ಮನೆಗಳಿಗೆ ಹಾನಿ ಉಂಟಾಗಬಾರದು ಎನ್ನುವ ಉದ್ದೇಶದಿಂದ ಅವುಗಳನ್ನು ಕೆರೆಯ ವಿಸ್ತೀರ್ಣದ ಪ್ರಮಾದಲ್ಲಿ ಕೋಡಿಯನ್ನು ನಿರ್ಮಿಸಿರುವುದು ಕಂಡು ಬಂದಿದೆ. ಉದಾಹರಣೆಗೆ: ದೇವಿಕೊಪ್ಪ ಗ್ರಾಮದಲ್ಲಿ ಅತೀ ದೊಡ್ಡದಾದ ಕೆರೆಯಿದೆ ಅದರ ವಿಸ್ತೀರ್ಣಕ್ಕೆ ತಕ್ಕಂತೆ ಕೋಡಿಯನ್ನು ನಿರ್ಮಾಣ ಮಾಡಿರುವುದು ಕಂಡುಬಂದಿದೆ.

ಕೋಡಿಗಳನ್ನು ಮುಖ್ಯವಾಗಿ ಕಲ್ಲಿನಿಂದ ಕಟ್ಟಿರುತ್ತಾರೆ. ಆದರೆ ಕೆಲವೊಂದು ಸ್ಥಳದಲ್ಲಿ ಬರೀ ಮಣ್ಣಿನಿಂದ ರಚನೆಯಾದ ಕೋಡಿಗಳನ್ನು ಈ ಒಂದು ಅಧ್ಯಯನದಲ್ಲಿ ಕಂಡು ಬಂದಿದೆ. ಉದಾಹರಣೆಗೆ: ಮುತ್ತಗಿ ಗ್ರಾಮದಲ್ಲಿ ಮಣ್ಣಿನ ಕೋಡಿ ನಿರ್ಮಿಸಿರುವುದನ್ನು ಕಾಣಬಹುದಾಗಿದೆ. ಕೆರೆಯಲ್ಲಿ ಕೋಡಿಯನ್ನು ನಿರ್ಮಾಣ ಮಾಡಬೇಕೆಂದರೆ ಅದಕ್ಕೆ ಸರಿಯಾದ ಜಾಗವನ್ನು ಆಯ್ಕೆ ಮಾಡಿಕೊಂಡು ಅಲ್ಲಿ ಕೋಡಿ ನಿರ್ಮಿಸಬೇಕು ಇದರಲ್ಲಿಯೇ ಕೆರೆ ಕಟ್ಟುವವನ ಸಾಮರ್ಥ್ಯ ಎಂತಹದು ಎಂದು ತೋರಿಸಿಕೊಡುತ್ತದೆ. ಸಾಮಾನ್ಯವಾಗಿ ಕೋಡಿಯನ್ನು ಕೆರೆಯಲ್ಲಿ ನೀರು ಹರಿದು ಬರುವ ಜಾಗದಲ್ಲಿ ನಿರ್ಮಿಸಬೇಕು. ಕೆರೆಯ ನೀರಿನ ಗರಿಷ್ಠಮಟ್ಟ ಹೆಚ್ಚಾದಾಗ ಕೋಡಿಯ ಮುಖಾಂತರ ಅದರ ಮೇಲೆ ನೀರು ಹಾದು ಹೋಗುತ್ತದೆ. ಆದರೆ ಅದರಲ್ಲಿನ ಮಣ್ಣು ಮಾತ್ರ ಅಲ್ಲಿಯೇ ಉಳಿಯುತ್ತದೆ. ಈ ರೀತಿಯ ಉದ್ದೇಶದಿಂದ ಕೆರೆಯ ಏರಿಗೆ ಯಾವುದೇ ಹಾನಿಯಾಗದಿರಲೆಂದು ಕೋಡಿಯನ್ನು ಕಟ್ಟುತ್ತಾರೆ.

ಒಂದೊಂದು ಪ್ರದೇಶದಲ್ಲಿ ವಿವಿಧ ರೀತಿಯ ಕೋಡಿಗಳು ಇರುವುದು ಕಂಡುಬರುತ್ತವೆ. ಪ್ರಾಚೀನ ಕಾಲದ ಜನರು ಕೋಡಿಯನ್ನು ಈ ರೀತಿಯಾಗಿ ನಿರ್ಮಿಸುತ್ತಿದ್ದರು. ಕೆರೆಯ ಎರಡು ತುದಿಗೆ ಕಂಬಗಳನ್ನು ಇಡುತ್ತಿದ್ದರು ಕೋಡಿಯು ಬಿದ್ದ ಪೂರ್ವದಲ್ಲಿ ಕಂಬಗಳ ಮೂಲಕ ಕೆರೆಯ ಏರಿಯ ಒಂದು ತುದಿಯಿಂದ ಇನ್ನೊಂದು ತುದಿಗೆ ಕಂಬವನ್ನು ಅನುಕೂಲವಾಗಲೆಂದು ಈ ಒಂದು ವ್ಯವಸ್ಥೆಯನ್ನು ಮಾಡುತ್ತಿದ್ದರು.

ವಿಜಯನಗರದ ಕೆಲವು ತಜ್ಞರು ಕೋಡಿಯನ್ನು ಕಟ್ಟುವುದರಲ್ಲಿಯೇ ಪರಿಣತಿಯನ್ನು ಹೊಂದಿದ್ದರು ಎಂದು ಒಂದು ಶಾಸನವು ದಾಖಲಿಸಿದೆ. ವೆಂಕಟಪತಿರಾಯನ ಕಾಲದ ರುದ್ರಪ್ಪ ನಾಯಿಡು ಎಂಬಾತನು ಕೋಡಿಯನ್ನು ಕಟ್ಟುವುದರಲ್ಲಿ ಪರಿಣಿತಿಯನ್ನು ಹೊಂದಿದ್ದನೆಂದು ತಿಳಿದು ಬಂದಿದೆ.

**ಕೆರೆಗಳ ನಿರ್ವಹಣೆ**

ಪ್ರಾಚೀನ ಕಾಲದಿಂದ ಭಾರತದಲ್ಲಿ ಕೆರೆಗಳ ನಿರ್ಮಾಣದ ಜೊತೆಗೆ ಅದರ ನಿರ್ವಹಣೆಗೆ ಸಹ ಬಹಳ ಪ್ರಾಧ್ಯಾನ್ಯತೆಯನ್ನು ಕೊಡುತ್ತಾ ಬಂದಿದ್ದಾರೆ. ಈ ನಿರ್ವಹಣೆ ಕಾರ್ಯವನ್ನು ಮಾಡದಿದ್ದರೆ ಕೆರೆಯ ನೀರು ಹಾಳಾಗಿ ಕಲುಷಿತವಾಗಿ ಊರಿನಲ್ಲಿ ರೋಗಗಳು ಅಂಟಿಕೊಳ್ಳುತ್ತವೆ. ಆದ್ದರಿಂದ ಕೆರೆಗಳ ನಿರ್ವಹಣೆಯ ಕಾರ್ಯವನ್ನು ರೂಢಿಸಿಕೊಂಡರು. ಕೆರೆಗಳ ನಿರ್ವಹಣೆಯನ್ನು ಪ್ರಾಚೀನ ಕಾಲದಲ್ಲಿ ರಾಜರು, ಅಧಿಕಾರಿವರ್ಗದವರು, ಸಾಮಂತರು ಹಾಗೂ ಕೆಲವೊಮ್ಮೆ ನೀರುಗಂಟಿಗರು ಇದರ ನಿರ್ವಹಣೆಯ ಕಾರ್ಯವನ್ನು ಅವನು ನೋಡಿಕೊಂಡು ಹೊಗಬೇಕಾಗುತ್ತದೆ. ಯಾರು ಇಲ್ಲದಿದ್ದಾಗ ಸರಕಾರವೇ ಇದರ ನಿರ್ವಹಣೆಯನ್ನು ಮಾಡಬೇಕಾಗುತ್ತದೆ.

ಕೆರೆಗೆ ನೀರು ಕಾಲುವೆ ಮುಖಾಂತರ ಬಂದು ಸೇರುವ ಸಂದರ್ಭದಲ್ಲಿ ಅದರ ಜೊತೆಗೆ ಮಣ್ಣು ಸಹ ಬಂದು ಶೇಖರಣೆಯಾಗಿರುತ್ತದೆ. ಇದರಿಂದ ಕೆರೆಯಲ್ಲಿ ನೀರಿನ ಪ್ರಮಾಣ ಕಡಿಮೆಯಾಗುತ್ತದೆ. ಅದನ್ನು ಕೋಡಿಯ ವ್ಯವಸ್ಥೆಯನ್ನು ಮಾಡುತ್ತಿದ್ದರು. ಕೆರೆಯಲ್ಲಿರುವ ಹೆಚ್ಚಿಗೆ ಮಣ್ಣನ್ನು ಹೂಳೆತ್ತುವ ಕಾರ್ಯವನ್ನು ಸರಕಾರವು ನೋಡಿಕೊಳ್ಳುತ್ತದೆ. ಇದರಿಂದ ಕೆರೆಯಲ್ಲಿ ನೀರಿನ ಪ್ರರ್ಮಾಣ ಹೆಚ್ಚಾಗುತ್ತದೆ. ಅದಕ್ಕೆ ಹೊಂದಿಕೊಂಡಂತೆ ಏರಿಯ ನಿರ್ಮಾಣವನ್ನು ಮಾಡುತ್ತಿದ್ದರು. ನೀರಿನ ಗರಿಷ್ಠಮಟ್ಟ ಕಡಿಮೆಯಾಗದಿರಲೆಂದು ಮತ್ತು ಅಲ್ಲಿ ಬೆಳೆದಿರುವ ಕಸವನ್ನು ತೆಗೆಸಿ ಗಿಡಗಳನ್ನು ಹಚ್ಚುವುದು ಒಂದು ನಿರ್ವಹಣೆಯ ಕ್ರಮವಾಗಿದೆ. ಅದೇರೀತಿ ಕೆರೆಗೆ ಸುತ್ತಲೂ ತಂತಿಯ ಬೇಲಿಯನ್ನು ಹಾಕಲಾಗುತ್ತಿತ್ತು. ಇದರಿಂದ ಕೆರೆಗಳ ರಕ್ಷಣೆ ಮಾಡಲು ಸಾಧ್ಯವಾಗುತ್ತದೆ.

ಉದಾಹರಣೆಗೆ: ಕಲಘಟಗಿಯ ರುಸ್ತುಂಕೆರೆಗೆ ಏರಿಯ ಸುತ್ತಲೂ ಬೇಲಿಯನ್ನು ನಿರ್ಮಾಣ ಮಾಡಿರುವುದನ್ನು ಕಾಣಬಹುದು.

ಈ ತಾಲೂಕಿನಲ್ಲಿ ೨೦೧೦ ರಲ್ಲಿ ಎಲ್ಲಾ ಗ್ರಾಮಗಳಲ್ಲಿ ಸರಕಾರವು ಕಾಮಗಾರಿ ಮಾಡಿದ್ದಾರೆ ಎಂದು ಹೇಳಬಹುದು. ಅದರೀತಿ ಪ್ರಸ್ತುತವಾಗಿ ಕೆಲವೊಂದು ಗ್ರಾಮದಲ್ಲಿ ಕೆರೆಗಳ ಹೂಳೆತ್ತುವ ಕಾರ್ಯ ನಡೆದಿರುವುದು ಕಂಡು ಬಂದಿದೆ. ಉದಾಹರಣೆಗೆ: ಹೀರೆಹೊನ್ನಳ್ಳಿ, ತಂಬೂರು, ಸಂಗಮೇಶ್ವರ ಕೆರೆಗಳಲ್ಲಿ ಹೂಳೆತ್ತವು ಕಾರ್ಯ ನಡೆಡದಿದೆ ಎಂದು ಹೇಳಬಹುದು.

ಕೆರೆಗಳ ನಿರ್ವಹಣೆಯನ್ನು ನೀರುಗಂಟಿಗಳಿಗೆ ವಂಶಪರಂಪರಿಕವಾಗಿ ರೂಢಿಯಲ್ಲಿ ಬಂದಿರುವುದು ಕಂಡು ಬಂದಿದೆ. ಆಧುನಿಕ ಕಾಲದ ಹವಾಮಾನಕ್ಕೆ ಹೋಲಿಸಿದಾಗ ಜನಸಂಖ್ಯಾಪ್ರಮಾನ ಹೆಚ್ಚಾಗುತ್ತಿದ್ದು ಜನಸಂಖ್ಯೆಗೆ ಅನುಗುಣವಾಗಿ ಆಹಾರವನ್ನು ಪೂರೈಸಲು ಅಧಿಕ ಕೃಷಿ ಉತ್ಪನ್ನ ಬೇಕಾಗಿದ್ದ ಕಾರಣ ಕೃತಕ ಜಲ ಸಂಗ್ರಾಹಕಗಳ ಅವಶ್ಯಕತೆ ತಲೆದೊರಿತು. ಅನೇಕ ಕೆರೆ, ಕುಂಟೆ, ಕಾಲುವೆ, ಏರಿ, ತೂಬು, ಕೋಡಿಯ ನಿರ್ಮಾಣದ ಅವಶ್ಯಕತೆಯಾಯಿತು. ಕೆರೆಗಳ ನಿರ್ವಹಣೆಗೆ ನಿರ್ವಾಹಕರ ಅವಶ್ಯಕತೆ ಉಂಟಾಯಿತು. ಕೆರೆಗಳ ಮೇಲೆ ತೆರಿಗೆ ವಿಧಿಸಿ ಕೆರೆಯ ರಕ್ಷಣೆ ಮತ್ತು ನಿರ್ವಹಣಾ ಕಾರ್ಯಗಳಿಗೆ ಅವುಗಳನ್ನು ಬಳಸುತ್ತಿದ್ದರು.

ಕೆರೆಗಳ ನಿರ್ವಾಹಕರೊಂದಿಗೆ ನೀರುಗಂಟಿಗಳನ್ನು ನಿಯೋಜಿಸುತ್ತಿದ್ದರು. ಇವರ ಕಾರ್ಯ ಕೆರೆಯ ಆಯಕಟ್ಟಿನವರಿಗೆ ನೀರನ್ನು ಬೀಡುವ ಕಾರ್ಯ ಇವರದಾಗಿರುತ್ತದೆ. ಮತ್ತು ಅದನ್ನು ಸಮನಾಗಿ ಹಂಚುವುದು. ಕಲಘಟಗಿ ತಾಲೂಕಿನ ಪ್ರಮುಖ ಕೆರೆಗಳು ನದಿಯಾಶ್ರಿತ ಹಾಗೂ ಮಳೆಯಾಶ್ರಿತ ಕೆರೆಗಳಾಗಿದ್ದು, ಅವುಗಳಲ್ಲಿ ಪ್ರಮುಖವಾಗಿ ದೇವಿಕೊಪ್ಪದ ಹೀರೆಕೆರೆ, ಸೋಮನಕೊಪ್ಪದ ಹೊಸಕೆರೆ, ಮುತ್ತಗಿ ತುಂಬಿಕೆರೆ, ಜಿನ್ನೂರಿನ ದೊಡ್ಡಕೆರೆ ಹೀಗೆ ಹಲವು ಕೆರೆಗಳಿಗೆ ನೀರು ಕಾಲುವೆ ಮುಖಾಂತರ ಬಂದು ಸೇರುತ್ತದೆ. ನೀರುಗಂಟಿಗಳಿಗೆ ಸರಕಾರವು ಇವರ ಸೇವೆಗೆ ಪ್ರತಿಫಲವಾಗಿ ಆಯಕಟ್ಟಿನ ಉಪಯೋಗಕಾರರು. ನಿರ್ದಿಷ್ಟ ವೇತನವನ್ನು ಧನ ಹಾಗೂ ಧಾನ್ಯಗಳ ರೂಪದಲ್ಲಿ ನೀಡುತ್ತಿದ್ದರು ಎಂದು ತಿಳಿದು ಬಂದಿದೆ.

## ಅಡಿ ಟಿಪ್ಪಣಿಗಳು

೧. ಸುರೇಶ ಹಾನಗಲ್ಲು., 'ಧಾರವಾಡ ಜಿಲ್ಲೆಯ ಶಾಸನಗಳು ಮತ್ತು ದೇವಾಲಯಗಳು', ಅಪ್ರಕಟಿತ ಮಹಾಪ್ರಬಂಧ, ಪುಟ-೧೮೯

೨. ಅದೇ ಪುಟ-೧೯೦

೩. ಕಲಬುರ್ಗಿ ಎಂ.ಎಂ 'ಧಾರವಾಡ ಜಿಲ್ಲೆಯ ಶಾಸನ ಸೂಚಿ', ಪುಟ-೨೬

೪. ಅದೇ

೫. ಅದೇ

೬. ಅದೇ ಪುಟ-೨೭

೭. ಅಪ್ಪಣ್ಣ ಹಂಜೆ., 'ಸಮವಸರಣ' ಪುಟ-೧೨೬

೮. ಅದೇ ಪುಟ-೧೨೭

೯. ಕಲಬುರ್ಗಿ. ಎಂ.ಎಂ., ಪುರ್ವೋಕ್ತ ಪುಟ-೨೫

೧೦. ಬಸವರಾಜ ಕೂಂಚುರು., ನಮ್ಮೂರು ಕೆರೆಗಳು, ಪುಟ-೫೯

೧೧. ನೀಲತ್ತಹಳ್ಳಿ ಕಸ್ತೂರಿ., ಕರ್ನಾಟಕದಲ್ಲಿ ಕೆರೆ ನೀರಾವರಿ, ಪುಟ-೨೬

೧೨. ಸಿ.ಎಸ್.ವಾಸುದೇವನ್., ಹಂಪಿ ಪರಿಸರದ ಕೆರೆಗಳು, ಪುಟ-೩೮

೧೩. ಅದೇ ಪುಟ- ೪೦

೧೪. ಕ್ಷೇತ್ರ ಕಾರ್ಯ ವರದಿ

೧೫. ಕ್ಷೇತ್ರ ಕಾರ್ಯ ವರದಿ

೧೬. ಕ್ಷೇತ್ರ ಕಾರ್ಯ ವರದಿ

೧೭. ಕ್ಷೇತ್ರ ಕಾರ್ಯ ವರದಿ

## ಅಧ್ಯಾಯ–ಐದು

# ನಂಬಿಕೆ ಮತ್ತು ಆಚರಣೆಗಳು

ಪ್ರಾಚೀನ ಮತ್ತು ಮಧ್ಯಕಾಲೀನ ಯುಗದಲ್ಲಿ ನೀರಾವರಿ ಕಾರ್ಯಗಳ ನಿರ್ಮಾಣದಲ್ಲಿ ಕೆರೆಗಳು ಆರ್ಥಿಕಾಭಿವೃದ್ಧಿಗೆ ಪೂರಕವಾದರೂ ಧಾರ್ಮಿಕ ಮಹೋನ್ನತಿಯ ಉದ್ದೇಶಗಳು ಪ್ರಧಾನವಾಗಿದ್ದವು. ಕೆರೆ ಕಾಲುವೆಗಳನ್ನು ನಿರ್ಮಿಸುವುದು, ದೇವಾಲಯಗಳನ್ನು ನಿರ್ಮಿಸುವುದು ಹಾಗೂ ಧಾರ್ಮಿಕ ಕಾರ್ಯಗಳನ್ನು ಕೈಗೊಂಡ ವ್ಯಕ್ತಿಗಳು ಪುಣ್ಯಕ್ಕೆ ಅರ್ಹರಾಗುತ್ತಾರೆ ಎಂಬ ನಂಬಿಕೆ ಪ್ರಾಚೀನ ಕಾಲದಿಂದಲೂ ಜನರಲ್ಲಿ ಬೆಳೆದು ಬಂದಿದೆ. ಕಲಘಟಗಿ ತಾಲೂಕಿನ ಕೆರೆಗಳನ್ನು ಕುರಿತಂತೆ ಕೆಲವು ನಂಬಿಕೆ ಆಚರಣೆಗಳನ್ನು ಈ ಕೆಳಗಿನಂತೆ ಚರ್ಚಿಸಲಾಗಿದೆ.

ಕೆರೆಗಳಿಗೆ ಪ್ರಾಚೀನ ಕಾಲದಿಂದಲೂ ವಿಶೇಷವಾದ ಸ್ಥಾನಮಾನ ನೀಡುತ್ತಾ ಬಂದಿದ್ದಾರೆ. ಕೆರೆಗಳ ಬಗೆಗೆ ದೇವತಾ ಮನೋಭಾವವನ್ನು ಬೆಳಸಿಕೊಂಡು ಗಂಗಾಮಾತೆಯ ಎನ್ನುವ ರೀತಿಯಲ್ಲಿ ಕೆರೆಗಳನ್ನು ಪೂಜಿಸುವ ಸಂಪ್ರದಾಯ ಅನಾದಿ ಕಾಲದಿಂದಲೂ ನಡೆಯುತ್ತಾ ಬಂದಿದೆ. ಇದೆ ಭಾರತೀಯ ಸಂಸ್ಕೃತಿಯಾಗಿದೆ. ಹಿರಿಯರು ನಡೆಸಿಕೊಂಡು ಬಂದಂತ ಸಂಪ್ರದಾಯಗಳನ್ನು, ಆಚಾರ–ವಿಚಾರಗಳನ್ನು ಮುಂದುವರೆಸಿಕೊಂಡು ಹೋಗುವುದು ಇಂದಿನ ಯುವ ಪೀಳಿಗೆಯವರಾದ ನಮ್ಮ ಕರ್ತವ್ಯವಾಗಿದೆ.

ಕಲಘಟಗಿ ಪ್ರದೇಶದ ವ್ಯಾಪ್ತಿಯಲ್ಲಿ ಮಳೆ ಬೀಳದೆ ಬರಗಾಲದ ಸಂದರ್ಭದಲ್ಲಿ ಊರಿನ ಎಲ್ಲಾ ಯುವಕರು ಒಟ್ಟಿಗೆ ಸೇರಿ ಜೇಡಿ ಮಣ್ಣಿನ ಮಳೆರಾಯನ ಮೂರ್ತಿಯನ್ನು ಮಾಡಿ ಮರದ ಹಲಗೆ ಮೇಲಿಟ್ಟು ಅರಿಶಿನ, ಕುಂಕುಮವಿಟ್ಟು ಹೂಗಳಿಂದ ಪೂಜಿಸಿ ನಂತರ ಬೆತ್ತಲೆ ಇರುವ ಓರ್ವ ಬಾಲಕನು ಮಳೆರಾಯನ ವಿಗ್ರಹವನ್ನು ತಲೆಯ ಮೇಲೆ ಹೊತ್ತುಕೊಳ್ಳುತ್ತಾನೆ. ಇವನ ಹಣೆಗೆ ಅರಿಶಿನ–ಕುಂಕುಮ ಹಚ್ಚಿ ಕೊರಳಿಗೆ ಹೂಮಾಲೆ ಹಾಕಿರುತ್ತಾರೆ. ಹುಡುಗರೆಲ್ಲರೂ ಸೇರಿಕೊಂಡು ಗ್ರಾಮದ ಪ್ರತಿ ಮನೆ ಮನೆಗೆ ತೆರಳಿ ಹಾಡನ್ನು ಹೇಳುತ್ತಾರೆ.

**ಹುಯ್ಯೊ ಹುಯ್ಯೊ ಮಳ್ರಾಯ**
**ಹೂವಿನ ಗಿಡ್ಕೆ ನೀರಿಲ್ಲ**
**ಬಾರೋ ಬಾರೋ ಮಳ್ರಾಯ**
**ಬಾಳೆ ಗಿಡ್ಕೆ ನೀರಿಲ್ಲ**
**ನೀ ಬಾರಪ್ಪೋ ಮಳೆರಾಯ,**
**ನೀ ಬಂದುಯ್ಯೋ ಗಿಳಿರಾಮ**
**ದೇಸ ದೇಸಾ ನಾವ್ ತಿರುಗಿ**

**ಮೂರು ದಾಸವಾಳದ ಹೂ ತಂದೋ**
**ನೀ ಮುಡಿ ಬಾರೋ ಗಿಳಿರಾಮ**
**ನೀ ಬಾರಪ್ಪೋ ಮಳೆರಾಯ ನೀ ಬಂದುಯ್ಯೋ ಗಿಳಿರಾಮ..........**

ಪ್ರತಿ ಮನೆಯ ಹೆಣ್ಣು ಮಕ್ಕಳು ಒಂದು ಕೊಡ ನೀರನ್ನು ಮಳೆರಾಯನ ಮೂರ್ತಿ ಹೊತ್ತ ಹುಡುಗನ ಮೇಲೆ ಸುರಿಯುತ್ತಾರೆ. ಅವನಿಗೆ ಅರಿಶಿನ ಕುಂಕುಮವಿಟ್ಟು ಪೂಜಿಸಿ ಗ್ರಾಮಕ್ಕೆ ಮಳೆ ಬರುವಂತೆ ಪ್ರಾರ್ಥಿಸುತ್ತಾರೆ. ಪ್ರತಿ ಮನೆಯವರು ದವಸ ಧಾನ್ಯ ನೀಡುತ್ತಾರೆ ಕೆಲವರು ಕಾಣಿಕೆ ನೀಡುತ್ತಾರೆ. ಊರೆಲ್ಲಾ ಪೂಜೆ ಮುಗಿದ ನಂತರ ಮಳೆರಾಯನ ಮೂರ್ತಿಯನ್ನು ಕೆರೆಯಲ್ಲಿ ವಿಸರ್ಜಿಸುತ್ತಾರೆ. ದವಸ ದಾನ್ಯಗಳನ್ನು ಮಾರಾಟ ಮಾಡಿ ಬಂದಂತಹ ಹಣದಿಂದ ಗ್ರಾಮದ ದೇವಸ್ಥಾನದಲ್ಲಿ ಪೂಜೆ ಮಾಡಿಸಿ ಪ್ರಸಾದವನ್ನು ಎಲ್ಲರಿಗೂ ಹಂಚಲಾಗುತ್ತದೆ. ಇಂತಹದ್ದು ಕೂಡ ಒಂದು ನಂಬಿಕೆ ಆ ಪ್ರದೇಶದ ಜನರಲ್ಲಿ ಬೇರೂರಿತ್ತು ಎಂದು ಕ್ಷೇತ್ರ ಅಧ್ಯಯನ ಮಾಡುವ ಸಂದರ್ಭದಲ್ಲಿ ಅಲ್ಲಿನ ಜನರಿಂದ ಬಂದ ಮಾಹಿತಿಯಾಗಿದೆ ಎಂದು ಹೇಳಲಾಗಿದೆ.

ಬರಗಾಲದ ಪರಿಸ್ಥಿತಿಯ ಗಂಭೀರತೆಯನ್ನು ಬಿಂಬಿಸುವ ಪದಗಳು ಮಳೆರಾಯನ ಮನ ಮುಟ್ಟುತ್ತವೆ ಎಂಬ ಬಲವಾದ ನಂಬಿಕೆ ಇದೆ. ಮಳೆ-ಬೆಳೆ ಬೇಸಾಯಗಾರನ ಬದುಕಿನ ಭಾಗವೆಂಬುದಕ್ಕೆ ಸಹಜವಾಗಿ ಹುಟ್ಟಿರುವ ಈ ಗಾದೆಗಳೇ ಸಾಕ್ಷಿ.

**ಭರಣಿ ಮಳ್ಗೆಧರಣಿಯೇ ಬಾಯ್‌ಬುಡ್ತದೆ.**

**ಆದ್ರಿ ಮಳ್ಗೆ ಆಗಿರೋ ಉಕ್ಕೆಗೆ ಬಿತ್ಬುಡು.**

**ಮಿಕ್ಕೆಲ್ಲವ ಮಿಕ್ಷೀರಿಲಿ ಚೆಲ್ಲು**

**ಅತ್ತದ ಮಳೆ ಎತ್ತಿಂದಾದ್ರೂ ಬರ್ತದೆ.**

**ಚಿತ್ತೆ ಮಳೆ ಮೀನಾಡ್ದಾಂಗಾಡ್ತಾಳೆ**

**ಕುಲ್ಡ ಚಿತ್ತೆ ಕಣ್‌ಮುಚ್ಕಂಡ್ ಉಯ್ತದೆ**

**ಹಸ್ತದ ಮಳೆ ಬರ್ದಿದ್ರೆ ಹೆತ್ತೋಳೂ ಹಿಟ್ಟಾಕಲ್ಲ.**

**ಉತ್ತರ ಪೂರ್ವ ಸಸ್ಯನಿ, ಅಪರಸಸ್ಯನಿ ರೇವುತಿ,**

**ಸರ್ವನಾಷ್ಯತಿ ಅಶ್ವಿನಿ, ಭರಣಿ ಸರ್ವ ಸಸ್ಯನಿ.............**

ದೇವಿಕೊಪ್ಪದ ದೊಡ್ಡಕೆರೆಯ ಏರಿಯ ಮುಂಬಾಗದಲ್ಲಿ ರಾಮಲಿಂಗೇಶ್ವರನ ದೇವಾಲಯವಿದ್ದು ಕೆರೆಯ ಕೋಡಿಯನ್ನು ಕಾಯುವ ರಕ್ಷಕ ಎಂಬ ನಂಬಿಕೆ ಇದೆ. ಪ್ರತಿ ದಿನ ಪೂಜೆ ಪುನಸ್ಕಾರಗಳು ನಡೆಯುತ್ತಿವೆ. ದೊಡ್ಡ ಕೆರೆ ಏರಿಯ ಮೇಲೆ ಗಣಪತಿಯ ಮತ್ತು ವೀರಭದ್ರನ ಗುಡಿ ಇದೆ. ಇಲ್ಲಿಯ ಗುಡಿಗೆ ಹೆಣ್ಣು ಮಕ್ಕಳು ಗಂಗಮ್ಮನ ಪೂಜೆ ಮಾಡುತ್ತಾರೆ. ಮಕ್ಕಳ ಫಲ ಇಲ್ಲದವರು, ಚರ್ಮದ ಕಾಯಿಲೆ ಇರುವವರು ಕೆರೆಯ ತಣ್ಣೀರಲ್ಲಿ ಮುಳುಗಿ ಮಡಿಮಾಡಿ ಬಟ್ಟೆಯಲ್ಲಿ ಹೊಸ ಸೀರೆ, ಅರಿಶಿನ-ಕುಂಕುಮ ತೊಂಬಿಟ್ಟನ್ನು ನೈವೇದ್ಯ ಮಾಡಿ

ಭಕ್ತಿಯಿಂದ ಪೂಜೆ ಸಲ್ಲಿಸುತ್ತಾರೆ. ವಿಶೇಷವಾಗಿ ಸೋಮವಾರ ಮತ್ತು ಶುಕ್ರವಾರ ಶುಭ ದಿನವಾಗಿದ್ದು ಇದನ್ನು ಗಂಗಮ್ಮನ ಪೂಜೆ ಎಂದು ಕರೆಯುತ್ತಾರೆ. ಕೆರೆಗಳು ತುಂಬಿದಾಗ ತೆಪ್ಪೋತ್ಸವ ಮಾಡಲಾಗುತ್ತದೆ ಎಂಬ ನಂಬಿಕೆ ಸಹ ಇಲ್ಲಿ ಕಂಡುಬರುತ್ತದೆ.

ಕಲಘಟಗಿಯ ರುಸ್ತುಂ ಕೆರೆ ಏರಿಯ ಮೇಲೆ ಬನ್ನಿಗಿಡದ ಹತ್ತಿರ ವೀರಗಲ್ಲು ಮತ್ತು ನಾಗರ ಮೂರ್ತಿಶಿಲ್ಪದ ಕಲ್ಲುಗಳಿದ್ದು, ಹೆಣ್ಣು ಮಕ್ಕಳು ನಾಗರ ಕಲ್ಲುಗಳನ್ನು ಪ್ರತಿಷ್ಠಾಪಿಸಿ ನಾಗದೋಷವನ್ನು ನಿವಾರಣೆ ಮಾಡಿಕೊಳ್ಳಲು ಪೂಜೆಪುನಸ್ಕಾರ ಕೈಗೊಳ್ಳುತ್ತಾರೆ ಎಂಬ ನಂಬಿಕೆ ಇಲ್ಲಿನ ಜನರಲ್ಲಿ ಕಂಡು ಬರುತ್ತದೆ.

ಕೆರೆಯು ಪವಿತ್ರವಾದುದೆಂಬ ಭಾವನೆಯು ಜನರಲ್ಲಿರುವುದನ್ನು ಕಾಣಬಹುದು. ಏಕೆಂದರೆ ಕೆರೆಗೆ ಪಂಚಕನ್ಯೆಯರು, ಅಪ್ಸರಾಸ್ತ್ರೀಯರು, ದೇವಾನುದೇವತೆಗಳು ಜಲವಿಹಾರಕ್ಕಾಗಿ ಆಗಮಿಸುತ್ತಾರೆಂಬ ನಂಬಿಕೆ ಇದೆ. ಹಾಗಾಗಿ ಈ ಕೆರೆಗಳ ಸುತ್ತಮುತ್ತಲಿನ ಗ್ರಾಮದೇವತೆಗಳು ಶಿವರಾತ್ರಿಯಿಂದ ಪ್ರಾರಂಭ ಮಾಡಿ ಯುಗಾದಿಯವರೆಗೆ ಗಂಗಾ ಸ್ನಾನಕ್ಕೆ ಆಗಮಿಸುತ್ತಾರೆ ಕೆಲವು ಗ್ರಾಮದ ದೇವತೆಗಳು ಶ್ರಾವಣ ಮತ್ತು ಕಾರ್ತಿಕ ಮಾಸದಲ್ಲಿ ಬರುತ್ತವೆ. ಇಲ್ಲಿಗೆ ಗ್ರಾಮದೇವತೆಗಳನ್ನು ಅರ್ಚಕ ವೃಂದ ಮತ್ತು ದೇವತೆಗಳ ಆರಾಧಕರು ಭಕ್ತಿ ಭಾವದಿಂದ ಕರೆತಂದು ಅವುಗಳಿಗೆ ಗಂಗಾಸ್ನಾನ ಮಾಡಿಸಿ, ಪೂಜಾ ಸಾಮಾಗ್ರಿಗಳನ್ನು ಮತ್ತು ಅಲಂಕರಣ ಸಾಮಾಗ್ರಿಗಳನ್ನು ಸ್ವಚ್ಚಗೊಳಿಸುತ್ತಾರೆ. ಅನಂತರ ಪುರೋಹಿತರು ದೇವತೆಗಳಿಗೆ ಪುಣ್ಯೋಜನೆ ಮಾಡಿಸಿ, ಗೋವಿನ ಗಂಜಲದಿಂದ ಶುದ್ಧೀಕರಿಸುತ್ತಾರೆ. ಕುಂಭಾಭಿಷೇಕ ಮಾಡಿ ಅಲಂಕರಣ ಮಾಡಿ ಅಭಿಷೇಕಕ್ಕೆ ಕೊನೆಯಲ್ಲಿ ಅಷ್ಟಗಂಧವನ್ನು ಬಳಸಿ, ವಿಶೇಷ ಪೂಜೆ ನೆರವೇರಿಸುತ್ತಾರೆ.

ಮದುವೆ ಸಮಾರಂಭಗಳಲ್ಲಿ, ಗೌರವ್ವನ ಹುಣ್ಣಿಮೆಯಲ್ಲಿ, ಗುಳ್ಳವ್ವನ ನಿರ್ಮಿಸುವ ಸಂದರ್ಭದಲ್ಲಿ, ಬರಗಾಲ ಸನ್ನಿವೇಶದಲ್ಲಿ ಕೆರೆಗಳನ್ನು ಪೂಜಿಸುವ ಪರಿಪಾಠ ಇಂದು ಕಲಘಟಗಿ ತಾಲೂಕಿನಲ್ಲಿ ರೂಢಿಯಲ್ಲಿದೆ. ಇದು ಒಂದು ವಿಶೇಷವಾದ ಸಂಪ್ರದಾಯವಾಗಿದೆ ಅಥವಾ ನಂಬಿಕೆಯಾಗಿರಬಹುದು ಎಂದು ಹೇಳಬಹುದು. ಅದೇ ರೀತಿಯಾಗಿ ತಾಲೂಕಿನ ಕೆಲವು ಕೆರೆಗಳಲ್ಲಿ ಮದುವೆ ಮುಂಚಿನ ದಿನ ಮನೆಯಲ್ಲಿ ದೇವರನ್ನು ಹೊಂಡಿಸುವ ಸಂದರ್ಭದಲ್ಲಿ ಮನೆಯಲ್ಲಿ ಪೂಜಾ ಕಾರ್ಯ ಮುಗಿಸಿ ಇಬ್ಬರನ್ನು ಕೆರೆಗೆ ಪೂಜಿಸಲು ಕರೆದುಕೊಂಡು ಹೋಗುತ್ತಾರೆ ಅಲ್ಲಿ ಪೂಜೆಯಾದ ನಂತರ ಮದುಮಗ ಮದುಮಗಳನ್ನು ಕೆರೆಯಿಂದ ಹೊತ್ತುಕೊಂಡು ಮೇಲಕ್ಕೆರಿ ದಡಕ್ಕೆ ತಂದು ನಿಲ್ಲಿಸುತ್ತಾನೆ ಇದೊಂದು ವಿಶೇಷವಾದ ಸಂಗತಿಯಾಗಿದೆ. ಈ ಸಂಪ್ರದಾಯ ಹೆಚ್ಚು ಕುರುಬರ ಮದುವೆಗಳಲ್ಲಿ ನಡೆಯುವುದಾಗಿದೆ. ಇದರ ಉದ್ದೇಶ ಮದುಮಗಳು ನೀರಿನಷ್ಟು ಪವಿತ್ರಳು ಎನ್ನುವ ನಂಬಿಕೆಯಲ್ಲಿ, ಈ ಒಂದು ಸಂಪ್ರದಾಯ ಇಂದು ಮುಂದುವೆಸಿಕೊಂಡು ಬಂದಿದೆ ಎಂದು ಕ್ಷೇತ್ರಕಾರ್ಯ ಸಂದರ್ಭದಲ್ಲಿ ತಿಳಿದುಬಂದ ಮಾಹಿತಿಯಾಗಿದೆ.

ಕಲಘಟಗಿ ತಾಲೂಕಿನ ಸಂಗಮೇಶ್ವರ ಗ್ರಾಮದ ಇಲ್ಲಿನ ಜನರಲ್ಲಿ ಒಂದು ನಂಬಿಕೆ ಈ ರೀತಿಯಾಗಿದೆ. ಆ ಗ್ರಾಮದಲ್ಲಿನ ಹನುಮಂತ ದೇವರ ದೇವಾಲಯದಲ್ಲಿ ಮೂರ್ತಿಯನ್ನು ಪೂಜಿಸಿದರೆ ಎಲ್ಲರಿಗೂ ಒಳ್ಳೆಯದ್ದು ಆಗುತ್ತದೆ ಎಂದು ಅಲ್ಲಿನ ಜನರ ನಂಬಿಕೆಯಾಗಿದೆ. ಆ ಗ್ರಾಮದಲ್ಲಿ ವಿಶೇಷವಾಗಿ ಹನುಮಂತ ದೇವರ ಗುಡಿಗೆ ಹೋಗಿ ಬೇಡಿಕೊಳ್ಳುತ್ತಾರೆ ಎಂಬ ಮಾಹಿತಿ ತಿಳಿದುಬಂದಿದೆ.

ಒಟ್ಟಾರೆಯಾಗಿ ಹೇಳುವುದಾದರೆ ಒಂದೊಂದು ಊರಿನಲ್ಲಿ ಒಂದೊಂದು ರೀತಿಯ ನಂಬಿಕೆ ಮತ್ತು ಆಚರಣೆ ಇವೆ. ಆದರೆ ಎಲ್ಲರೂ ಪೂಜಿಸುವುದು ಗಂಗಾದೇವಿಯನ್ನು ಕೆಲವೊಂದು ಸ್ಥಳದಲ್ಲಿ ಈ ಒಂದು ಕಾರ್ಯಕ್ಕೆ ಬೇರೆ ಹೆಸರಿನಿಂದ ಕರೆದಿರುವುದು ಕಂಡುಬರುತ್ತದೆ. ಈ ರೀತಿಯ ನಂಬಿಕೆ ಆಚರಣೆ ಇಂದು ಭಾರತ ದೇಶದಲ್ಲೂ ರೂಢಿಯಲ್ಲಿದೆ ಎಂದು ಹೇಳಬಹುದು.

ಈ ಮೇಲಿರುವ ಕಲಘಟಗಿ ತಾಲೂಕಿನ ಕೆರೆಗಳಿಗೆ ಸಂಬಂಧಿಸಿದ ನಂಬಿಕೆ ಆಚರಣೆಗಳಾಗಿದ್ದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ತಿಳಿದುಬಂದಿದೆ.

ಪ್ರತಿಯೊಂದು ಜನಾಂಗವೂ ತನ್ನ ನೈಸರ್ಗಿಕ ಪರಿಸರಕ್ಕೆ ಹೊಂದಿಕೊಳ್ಳುವುದು ಸುತ್ತಲಿನ ಸಹ ಮಾನವರ ಜೊತೆಗಿನ ಹೊಂದಾಣಿಕೆ ಮತ್ತು ಅದರ ಮಾನಸಿಕ ಪ್ರಪಂಚದ ಕ್ರಿಯೆ–ಪ್ರಕ್ರಿಯೆಗಳನ್ನು ತನ್ನ ಸಂಸ್ಕೃತಿಯಲ್ಲಿ ಪಡೆದಿರುವುದು, ನಿಸರ್ಗ ಶಕ್ತಿಗಳಾದ ಮಳೆ, ಚಳಿ, ಗಾಳಿ ಮುಂತಾದವುಗಳೊಡನೆ ಸೆಣಸುತ್ತಾ ತಾನು ಬದುಕಬೇಕಾಗುವುದು, ಬದುಕಲು ಬೇಕಾದ ಆಹಾರವನ್ನು ಪಡೆದುಕೊಳ್ಳುವುದು ಎನಿಸಿದರೆ ಸುತ್ತಲಿನ ಸಹ ಮಾನವರ ಜತೆ ಬಾಳುವುದು. ಅವಶ್ಯವೆನಿಸಿದ ಸಮಾಜ ವ್ಯವಸ್ಥೆ, ಮದುವೆ, ಕುಟುಂಬ ಮುಂತಾದ ಮನುಷ್ಯನ ವ್ಯವಸ್ಥಾ ಪ್ರಪಂಚದೊಂದಿಗೆ ಹೊಂದಾಣಿಕೆಯಾಗಿರುತ್ತದೆ. ಮೂರನೇಯದಾದ ಮಾನಸಿಕ ಪ್ರಪಂಚದಲ್ಲಿ ಭೂತ ಪ್ರೇತಗಳು, ಪರಲೋಕದ ಪರಿಕಲ್ಪನೆ, ಪೂಜೆ, ಆರಾಧನೆ, ಅರ್ಪಣೆ, ಬಲಿಗಳು ಮುಂತಾದ ಧಾರ್ಮಿಕ ಸಂಸ್ಥೆಗಳು ಅವನ ನಿಸರ್ಗದ ಬಗೆಗಿನ ಆಶ್ಚರ್ಯ ಮತ್ತು ಯೋಚನೆಯಿಂದಾಗಿ ರೂಪುಗೊಳ್ಳುತ್ತವೆ.

ಇಂತಹ ನಂಬಿಕೆಗಳು ನೂರಾರು ವರ್ಷಗಳಿಂದ ಜನಪದರ ಜೀವನದಲ್ಲಿ ಹಾಸು ಹೊಕ್ಕಾಗಿ ಬಂದಿರುವ ಅವರ ಆಚಾರ ವಿಚಾರಗಳು ಇಂದು ನಗರ ಮತ್ತು ಹಳ್ಳಿಗಳಲ್ಲಿ ಪ್ರಸ್ತುತವಾಗಿ ಸಹ ಕಂಡು ಬರುತ್ತವೆ. ಸಾಮಾಜಿಕವಾಗಿ, ಧಾರ್ಮಿಕವಾಗಿ, ಐತಿಹಾಸಿಕವಾಗಿ ಇವುಗಳನ್ನು ಗಮನಿಸಿದರೆ ಇವು ಮಾನವನ ಪರಿಸರದಿಂದ ಅಥವಾ ಪ್ರಕೃತಿ ಮೂಲದಿಂದ ಹುಟ್ಟಿಕೊಂಡಿವೆ. ಅಂತಹ ನಂಬಿಕೆಗಳನ್ನು ಕೆಲವು ಭಾಗಗಳಾಗಿ ವಿಂಗಡಿಸಬಹುದು. ಮೊದಲನೆಯದಾಗಿ ಮಾನವನ ಶರೀರ ಮತ್ತು ಸಾಮಾಜಿಕ ಸಂಬಂಧ ಮೊದಲಾದವುಗಳನ್ನು ಒಳಗೊಂಡಿರುತ್ತವೆ. ನಂಬಿಕೆಗಳು ಜನಪದರ ಜೀವನದಲ್ಲಿ ಹಾಸುಹೊಕ್ಕಾಗಿವೆ. ಮಾನವರು ಪ್ರಾಣಿ, ಪಕ್ಷಿ ಮತ್ತು ಎಲ್ಲಾ ಜೀವಸಂಕುಲದ ಮೇಲೆ ನಂಬಿಕೆ ಇಟ್ಟಿದ್ದಾರೆ. ಪ್ರಸ್ತುತ ಅಧ್ಯಯನಕ್ಕೆ ಸಂಬಂಧಪಟ್ಟ ಕೆರೆಗಳ ಬಗ್ಗೆ ಹಲವು ನಂಬಿಕೆಗಳು ಸಹ ಕಂಡು ಬಂದಿವೆ. 'ಊರಿಗೆ ಒಂದು ಕೆರೆ ನೀರಿಗೊಂದು ಬಾವಿ' ಎಂಬಂತೆ ಪ್ರತಿ ಹಳ್ಳಿಯಲ್ಲಿ ಒಂದು ಕೆರೆ–ಬಾವಿ ಇದ್ದೆ ಇರುತ್ತವೆ. ಕೆರೆಯು ಗ್ರಾಮೀಣ ಜನರ ಜೀವಾಳ ಮತ್ತು ಸ್ವತ್ತು ಕೂಡ ಹೌದು. ಕೆರೆಯು ಅಧಿದೇವತೆಯಾದ ಹೊನ್ನಮ್ಮ ನಮ್ಮನ್ನು ಕಾಪಾಡುತ್ತಾಳೆ ಎಂಬ ನಂಬಿಕೆ ಇದೆ ಆ ವರ್ಷ ಕೆರೆಗಳು ತುಂಬಿದರೆ ಹಳ್ಳಿಗಳಲ್ಲಿ ಸಂಭ್ರಮವೋ ಸಂಭ್ರಮ: ಈ ವರ್ಷ ಸುಗ್ಗಿ

ಸಮೃದ್ಧಿಯಾಗಿರುತ್ತದೆ. ಎಂಬ ಸಂಗತಿ ಕೆರೆಗಳು ತುಂಬಿದರೆ ನಮಗೆ ಬರವಿಲ್ಲ ಕೆರೆ ತುಂಬದೇ ಹೋದರೆ ನಮಗೆ ಬರಗಾಲ ಖಂಡಿತ ಎಂಬುದು ಜಾನಪದರ ನಂಬಿಕೆಯಾಗಿದೆ.

ಮಳೆಯ ನೀರು ಮೊದಲು ಸಂಗ್ರಹವಾಗುವುದು ಹೊಳೆ-ಹಳ್ಳಗಳಲ್ಲಿ ಅವು ತುಂಬಿ ಹರಿಯುತ್ತವೆ. ಭಾರತೀಯರಿಗೆ ಪ್ರತಿಯೊಂದು ಹೊಳೆ-ಹಳ್ಳ ಪವಿತ್ರವಾದುದಾಗಿವೆ. ಹರಿಯುವ ಹಳ್ಳ, ಕೆರೆ, ಕೊಳ್ಳ ಶೀಲ ಮತ್ತು ಪರಿಶುದ್ಧತೆಯ ಸಂಕೇತವಾಗಿವೆ. ಅವುಗಳಲ್ಲಿ ಸ್ನಾನ ಮಾಡಿದರೆ ಪುಣ್ಯ ಬರುವುದು ಎಂಬ ನಂಬಿಕೆ ಇದೆ ಇದಕ್ಕೆ ಸಂಬಂಧಪಟ್ಟಂತಹ ಒಂದು ಗಾದೆ ಈ ರೀತಿಯಾಗಿದೆ 'ಗಂಗಾ ಸ್ನಾನ ತುಂಗಾ ಪಾನ' ಎಂಬ ಗಾದೆ ಆಯಾ ನದಿಗಳ ಮಹತ್ವವನ್ನು ಸೂಚಿಸುತ್ತದೆ. ಮಳೆಯು ಹೆಚ್ಚಾಗಿ ಬಂದರೆ ಊರಿನಲ್ಲಿರುವಂತಹ ಕಾಲುವೆಗಳು, ಕೆರೆಗಳು, ಹಳ್ಳಗಳು ತುಂಬಿ ಹರಿಯುತ್ತಿದ್ದರೆ ಅವುಗಳ ಪ್ರಮಾಣವನ್ನು ಕಡಿಮೆ ಮಾಡಲು ಅಥವಾ ನೀರಿನ ಹರವು ಕಡಿಮೆಯಾಗಲು ಆ ಊರಿನ ಹಳ್ಳಕ್ಕೆ, ಕೆರೆಗೆ, ಕಾಲುವೆಗೆ ಹೋಗಿ ಪೂಜೆಯನ್ನು ಸಲ್ಲಿಸಿ ಬಾಗಿನವನ್ನು ಅರ್ಪಿಸಬೇಕು ಎಂಬ ಪರಂಪರೆ ಬಹಳ ಹಿಂದಿನಿಂದಲೂ ನಡೆದು ಬಂದಿದೆ. ಇಂತಹ ಒಂದು ಪದ್ಧತಿಯು ಅವರ ನಂಬಿಕೆಯಲ್ಲಿ ಗಮನಾರ್ಹವಾದ ಸಂಗತಿಯಾಗಿದೆ. ಪ್ರಾಚೀನ ಕಾಲದಿಂದ ಹಿಡಿದು ಇಂದಿನವರೆಗೆ ದೇಶದಲ್ಲಿರುವ ಎಲ್ಲ ನದಿಗಳಿಗೆ ತನ್ನದೇ ಆದ ಒಂದು ಹಿನ್ನೆಲೆ, ಐತಿಹ್ಯ, ಕಥೆಗಳು ಇವೆ. ನದಿಗಳು ಗುಪ್ತಗಾಮಿನಿಯಾಗಿ ಹರಿಯುತ್ತಿರುತ್ತಿವೆ. ನದಿಗಳು ಎಲ್ಲೋ ಹುಟ್ಟಿ, ಎಷ್ಟೋ ಮೈಲುಗಳವರೆಗೆ ಹರಿದು ಸಮುದ್ರವನ್ನು ಸೇರುತ್ತವೆ. ಇಂತಹ ನದಿಗಳಿಗೆ ಆಧುನಿಕ ಕಾಲದಲ್ಲಿ ಆಣೆಕಟ್ಟನ್ನು ಕಟ್ಟಿ ನೀರನ್ನು ಕಾಲುವೆ ಮುಖಾಂತರವಾಗಿ ಹರಿಸಿ ನೀರಾವರಿ ಕೃಷಿ ಮಾಡಲಾಗುತ್ತದೆ. ಇಂದು ಹವಾಮಾನದಲ್ಲಿ ಬಹಳ ವ್ಯತ್ಯಾಸವಾಗಿದೆ ಅದೇರೀತಿ ಮಳೆಯ ಪ್ರಮಾಣ ಸಹ ಕಡಿಮೆಯಾಗಿದೆ. ಪ್ರಸ್ತುತದಲ್ಲಿ ನದಿಗಳು ತುಂಬಿ ಹರಿಯುವುದು ಕಡಿಮೆ. ನದಿಯ ನೀರು ರಾಜಗಾಂಭೀರ್ಯದಿಂದ ನಿಧಾನವಾಗಿ ಪ್ರವಹಿಸುತ್ತವೆ. ಹಳ್ಳಗಳ ನೀರು ಬೇಗ ಬಂದು ಬೇಗ ನೀರಿನ ಪ್ರಮಾಣ ಕಡಿಮೆಯಾಗುತ್ತದೆ. ಹೊಳೆ, ಹಳ್ಳ, ಕೆರೆಗಳ ನೀರು ಬಹು ಉಪಯೋಗವಾಗಿವೆ. ಬಯಲು ಸೀಮೆಯ ಜನರಿಗೆ ಈ ಕೆರೆಯು ಜೀವನಾಡಿಯಾಗಿದೆ. ಇದು ಇಂದು ಜನರಿಗೆ ಪವಿತ್ರವಾಗಿದೆ. ಕೆರೆಯೊಂದಿಗೆ ಅವರು ಭಾವನಾತ್ಮಕವಾದ ಸಂಬಂಧವನ್ನು ಹೊಂದಿರುವರು.

ಗ್ರಾಮೀಣ ಪ್ರದೇಶಗಳಲ್ಲಿ ಅಥವಾ ನಗರಗಳಲ್ಲಿ ರಾಜರು, ಅಧಿಕಾರಿಗಳು, ಹಣವುಳ್ಳವರು, ಊರಿನ ಪ್ರಮುಖರು, ಪರೋಪಕಾರಿಗಳು ಜನರ ಹಿತಕ್ಕಾಗಿ ಇಂತಹ ಕೆರೆಗಳನ್ನು ಕಟ್ಟಿಸುತ್ತಿದ್ದರು. ಇಂತಹ ಕೆಲವು ಕೆರೆಗಳು ಪ್ರಸ್ತುತ ಅಧ್ಯಯನದಲ್ಲಿ ಕ್ಷೇತ್ರಕಾರ್ಯವನ್ನು ಕೈಗೊಂಡ ಸಂದರ್ಭದಲ್ಲಿ ಇರುವುದು ಕಂಡುಬಂದಿವೆ.

ಪ್ರಸ್ತುತವಾಗಿ ಕಲಘಟಗಿ ಪ್ರದೇಶದಲ್ಲಿ ಹುಟ್ಟಿದಂತಹ ಬೇಡ್ತಿ ನದಿಯ ಕುರಿತು ಈ ರೀತಿಯ ನಂಬಿಕೆ ಕಂಡು ಬಂದಿದೆ. ಬೇಡ್ತಿ ನದಿಗೆ ಗಂಗಾವಳಿ ಎಂಬ ಹೆಸರು ಹೇಗೆ ಬಂದಿತೆಂದರೆ ಕಲಘಟಗಿ, ಯಲ್ಲಾಪುರ, ಕಾರವಾರ, ಅಂಕೋಲಾ ತಾಲೂಕುಗಳಲ್ಲಿ ಇರುವಂತಹ ದೊಡ್ಡ ಕಾಡು ಗಿಡಮೂಲಿಕೆಗಳಿಗಿರುವಂತಹ ಪ್ರದೇಶದಲ್ಲಿ ನೀರು ಹರಿದು ಬರುತ್ತದೆ. ಆ ಮಳೆ ನೀರು ಅದಕ್ಕೆ ಬಂದಿದ್ದ ಕಾರಣ ಗೋಕರ್ಣ ಸಮೀಪದ ಸಮುದ್ರದಲ್ಲಿ ಹೋಗುವ ಸಮಯದಲ್ಲಿ ಔಷಧಿ ಗುಣಗಳು ಹೊಂದಿ ಆ ನದಿಯಲ್ಲಿ ಔಷಧಿ ಗುಣಗಳು ಆವರಿಸಿಕೊಂಡಿರುತ್ತವೆ ಮತ್ತು ಅದರಲ್ಲಿ ಸ್ನಾನ ಮಾಡಿದರೆ ಅನೇಕ ಕಾಯಿಲೆಗಳು ನಾಶವಾಗುತ್ತವೆ ಎಂಬ ನಂಬಿಕೆ ಜನರಲ್ಲಿ ಮೂಡಿದೆ ಎಂದು ಹೇಳಿದ್ದಾರೆ. ನೀರಿಗೆ ಬಲಿ ಕೊಡುವ ಆಚರಣೆಯು ಕೇವಲ ಭಾರತಕ್ಕೆ ಮಾತ್ರ ಸೀಮಿತವಲ್ಲ ಪ್ರಪಂಚದ ಬೇರೆ ಬೇರೆ ದೇಶಗಳಲ್ಲಿ ನೀರಿಗೆ ಬಲಿ ಕೊಡುವ ವಿಧಿಗಳು ಆಚರಣೆಯಲ್ಲಿ ಇದ್ದದ್ದನ್ನು ಜಾನಪದ ವಿದ್ವಾಂಸರು ದಾಖಲಿಸಿದ್ದಾರೆ. ಈ ನೆಲೆಯಲ್ಲಿ ಬಲಿ ಆಚರಣೆಯನ್ನು ಕುರಿತು ಆಲೋಚಿಸಿದರೆ ತೆರೆದುಕೊಳ್ಳುವ ಸಂಗತಿಗಳು ಬೆರಗು ಹುಟ್ಟಿಸುತ್ತವೆ. ಬಲಿ ಆಚರಣೆಯನ್ನು ನೀರು ಮತ್ತು ಮನುಷ್ಯನ ಮೂಲ ಪ್ರವೃತ್ತಿಗಳ ಸಂದರ್ಭದಲ್ಲಿ ಇದನ್ನು ಚರ್ಚಿಸಲಾದ ಅಗತ್ಯವಿದೆ. ಪ್ರಕೃತಿಯ ವಿಲಕ್ಷಣ ಗುಣ ಧರ್ಮಗಳನ್ನು ನೀರಿನಷ್ಟು ಸಮರ್ಥವಾಗಿ ಪ್ರತಿ ಫಲಿಸುವ ಮತ್ತೊಂದು ವಸ್ತುವನ್ನು ನಾವು ಕಲ್ಪಿಸಿಕೊಳ್ಳಲು ಸಾದ್ಯವಿಲ್ಲ[೪].

ಜನಪದರಲ್ಲಿ ಇಂತಹ ನಂಬಿಕೆ ಮತ್ತು ಆಚರಣೆಗಳು ಇದ್ದವು. ಅವುಗಳ ಸಾಹಿತ್ಯ ರೂಪವನ್ನು ಪಡೆದು ಜನಪದಗೀತೆಗಳಾಗಿ ಇಂದಿಗೂ ಉಳಿದು ಬಂದಿವೆ. ಕನ್ನಡದ ಒಂದು ಜನಪದ ಗೀತೆಯಂತೆ ಕಲ್ಲನಕೇರಿ ಮಲ್ಲನಗೌಡನೆಂಬುವನು ಒಂದು ಕೆರೆಯನ್ನು ಕಟ್ಟಿಸುತ್ತಾನೆ. ಆದರೆ ಆ ಕೆರೆಯ ಏರಿಯು ಬಲವಾಗಿ ನಿಲ್ಲದೆ ಒಡೆದುಹೋಗುತ್ತದೆ. ಪ್ರತಿ ಬಾರಿಯು ಸರಿಪಡಿಸಿದ ನಂತರವೂ ಏರಿಯು ಒಡೆಯುತ್ತಲೇ ಇರುತ್ತದೆ. ಈ ಕಾರಣದಿಂದ ಮಲ್ಲನಗೌಡನು ಒಬ್ಬ ಜೋತಿಷ್ಯನನ್ನು ಕಂಡು ಇದಕ್ಕೆ ಪರಿಹಾರವನ್ನು ಸೂಚಿಸಲು ಕೋರುತ್ತಾನೆ. ಜೋತಿಷ್ಯನು ಕೆರೆಗೆ ನರಬಲಿಯನ್ನು ನೀಡಿದ ಪಕ್ಷದಲ್ಲಿ ಈ ಕೆರೆಯ ಏರಿಯು ಭದ್ರವಾಗಿರುತ್ತದೆ ಎಂದು ತಿಳಿಸುತ್ತಾನೆ. ಈ ಕಾರ್ಯಕ್ಕೆ ಊರ ಜನರು ಮುಂದೆ ಬರುವುದಿಲ್ಲ. ಆಗ ಎಲ್ಲರ ಒಳಿತನ್ನು ಗಮನದಲ್ಲಿಟ್ಟುಕೊಂಡು ಮಲ್ಲನಗೌಡನ ಕಿರಿಯ ಸೊಸೆ ಭಾಗೀರಥಿ ಕೆರೆಗೆ ಆಹುತಿಯಾಗುತ್ತಾಳೆ. ನಂತರದಲ್ಲಿ ಕೆರೆಯ ಏರಿಯು ಭದ್ರವಾಗಿ ನಿಲ್ಲುತ್ತದೆ. ಜನರು ಆಹುತಿಯಾದ ಭಾಗೀರಥಿಗೆ ಒಂದು ಚಿಕ್ಕ ಗುಡಿಯನ್ನು ಕೆರೆಯ ಸಮೀಪದಲ್ಲಿ ಕಟ್ಟಿ ಅವಳ ಮೂರ್ತಿಯನ್ನು ಸ್ಥಾಪಿಸಿ ಪೂಜಿಸುತ್ತಾರೆ ಎಂಬುದು ಜನಪದ ಗೀತೆಯ ಸಾರವು[೫].

ಹೀಗೆ ಮನೆತನದ ಗೌರವಕ್ಕೆ ಊರ ಒಳಿತಿಗೆ ಜಲಮೂಲಕ್ಕೆ ಬಲಿಯಾಗುವ ಹೆಣ್ಣನ್ನು ದೇವತೆಯಾಗಿಡುವ ಕ್ರಮದಲ್ಲಿಯೇ ಪ್ರಕೃತಿ ಮನುಷ್ಯನ ಅಸಹಜ ಅತಿಕ್ರಮಣವನ್ನು ಪ್ರತಿಭಟಿಸುವ ನೆಲೆಗಳನ್ನು ಕಾಣಬಹುದು.

**ಆಚರಣೆಗಳು**

ಪ್ರಾಚೀನ ಕಾಲದಿಂದಲೂ ಭಾರತದಲ್ಲಿ ಅನೇಕ ಆಚರಣೆಗಳನ್ನು ಜಾನಪದರು ರೂಢಿಸಿಕೊಂಡು ಬಂದಿದ್ದಾರೆ. ಅದರಲ್ಲಿ ಈ ಕೆರೆಗೆ ಸಂಬಂಧಪಟ್ಟ ಆಚರಣೆಗಳು ಸಹ ಇಲ್ಲಿ ಮುಖ್ಯವಾಗಿ ಕಂಡು ಬರುತ್ತವೆ. ಇಂತಹ ಆಚರಣೆಗಳಲ್ಲಿ ಬಹು ಮುಖ್ಯವಾಗಿ ಮಹಾನವಮಿ, ಶಿವರಾತ್ರಿ, ದೀಪಾವಳಿ, ಗಣೇಶ ಚತುರ್ಥಿ ಮುಂತಾದ ಆಚರಣೆಗಳು ರೂಢಿಯಲ್ಲಿವೆ.

'ಗಣೇಶ'ನ ಹಬ್ಬಕ್ಕೆ ತಯಾರಾಗುವ 'ಗಣೇಶ'ನ ವಿಗ್ರಹಕ್ಕೆ ಬೇಕಾದ ಜೇಡಿಮಣ್ಣು ಒದಗಿಸುವುದೇ ಕೆರೆಯಂಗಳದಿಂದ. ಒಂದೂರಿನ ಕೆರೆಯ ಜೇಡಿಮಣ್ಣಿನಿಂದ ತಯಾರಿಸಲ್ಪಟ್ಟ ಗಣೇಶ ಮತ್ತೊಂದು ಊರಲ್ಲಿ ಪೂಜೆ ಕೈಗೊಂಡು ಆ ಊರಿನ ಕೆರೆಯಲ್ಲಿ ವಿಸರ್ಜನೆಗೊಂಡು ಮತ್ತೇ ಜೇಡಿಮಣ್ಣಾಗಿ ಪರಿವರ್ತನೆಯಾಗುತ್ತಿದ್ದ. 'ಪರ್ಜನ್ಯಜಪ' ಎಂಬ ಋಗ್ವೇದ ಉಕ್ತಿ ಜಪ ಕೊಡುವುದೇ ಕೆರೆಯ ನೀರಲ್ಲಿ ನಿಂತು ಪ್ರಾಥಃ ಕಾಲದ ಸಂಧ್ಯಾವಂದನೆ ನಡೆಯುತ್ತಿದ್ದುದೇ ನದಿ ತೀರದಲ್ಲಿ ಅಥವಾ ಕೆರೆಯ ಏರಿಯ ಮೇಲೆ. ಮನುಷ್ಯನ ಅಕ್ಷರ ಕಲಿಕೆ ಶುರುವಾಗಿದ್ದೇ 'ನದಿಪಾತ್ರದ' ಅಥವಾ 'ಕೆರೆಪಾತ್ರದ' ಮರಳರಾಶಿಯಲ್ಲಿ. ತದನಂತರವೂ ಅಕ್ಷರ ತಿದ್ದಿದ ಸ್ಲೇಟ್ ತಯಾರಾದದ್ದೇ ಕೆರೆ ಅಂಗಳದ ಜೇಡಿಮಣ್ಣಿನಿಂದ, 'ಅಪರ' ಶ್ರಾದ್ಧ, ಕರ್ಮಾದಿ ಬಾಳಿನಾಚೆಯ ಉತ್ತರ ಕ್ರಿಯಾದಿಗಳು ನಡೆಯೊದೆ ನದಿ ತೀರ ಅಥವಾ ಕೆರೆಯ ಹತ್ತಿರ, ದೇವರನ್ನು ತೊಳೆಯಲು, ದೇವಸ್ಥಾನ ಅಂಗಳ ಸಾರಿಸಲು, ಸುಣ್ಣ ಬಳಿಯಲು, ದೇವಸ್ಥಾನದ ಸುತ್ತಲಿನ ದೇವರಮರ ಅಥವಾ ದೇವರವನ, ದೇವರ ಕಾಡಿಗೆ ನೀರೊದಗಿಸೋದೂ ಕೆರೆಯೇ ಆಗಿದೆ. ಎಂದ ಮೇಲೆ ಧಾರ್ಮಿಕ ವಿಧಿ-ವಿಧಾನಾಚರಣೆಯಲ್ಲಿ ಕೆರೆಯ ಔಚಿತ್ಯ ವೇದ್ಯವಾಗುತ್ತದೆ.

ತೆಪ್ಪೋತ್ಸವದಲ್ಲಿ ಪುರೋಹಿತನ ಪ್ರವೇಶವಿಲ್ಲದೆ ಎಲ್ಲಾ ಜಾತಿಯ ಜನ ಸೇರಿ ಕೆರೆಯಲ್ಲಿ ಉತ್ಸವ ನಡೆಸಿ ಸಂಭ್ರಮಿಸಲು ಕೆರೆಯೇ ಕಾರಣ. ಸಾಮಾಜಿಕ ನ್ಯಾಯದ ರೂವಾರಿ ಕೆರೆಯಾಗಿತ್ತು. ಇದೇ ಗುಂಪಿಗೆ ಸೇರುವಂತಹ ಗಂಗಮ್ಮನ ಜಾತ್ರೆ, ಕೆರೆದೇವರಿ, ಊರದೇವರ, ಬಲಿ, ನಿಂತ ಬೆಳೆಗಳ ಮೇಲೆ 'ಬಲಿರಕ್ತ' ಸಿಂಚನ, ಇವೆಲ್ಲಾ ಧಾರ್ಮಿಕ ಚಟುವಟಿಕೆಗಳೆಲ್ಲಾ ಹುಟ್ಟಿಕೊಂಡು ನೆಲೆನಿಂತಿರುವುದು ಕೆರೆಯಿಂದಾಗಿ ಅನೋದು ಹೆಚ್ಚು ನಿಜ.

ಕಲಘಟಗಿಯಲ್ಲಿಯೂ ಸಹ ಇಂತಹ ಆಚರಣೆಗಳು ನಡೆಯುವುದು ಕಂಡು ಬಂದಿವೆ. ಸೋಮನಕೊಪ್ಪ ಗ್ರಾಮದಲ್ಲಿ ಈ ಆಚರಣೆ ಪ್ರತಿ ಶಿವರಾತ್ರಿಯ ದಿನದಂದು ಆ ಊರಿನ ಜನರು ಅಲ್ಲಿರುವ ತುಂಬಿಕೆರೆಗೆ ಹೋಗಿ ಮೂರು ದಿನಗಳ ಕಾಲ ಅಲ್ಲಿಯೇ ಇದ್ದು ಶಿವರಾತ್ರಿಯ ಆಚರಣೆಯನ್ನು ಮಾಡುತ್ತಾರೆ ಎಂದು ಕ್ಷೇತ್ರಕಾರ್ಯ ಸಂದರ್ಭದಲ್ಲಿ ತಿಳಿದುಬಂದ ಮಾಹಿತಿಯಾಗಿದೆ.

**ನರಬಲಿ**

ಜನಪದ ಬದುಕಿನಲ್ಲಿ 'ಬಲಿ'ಗೆ ಒಂದು ವಿಶಿಷ್ಟ ಸ್ಥಾನವಿದೆ. ಅದು ಅತಿಮಾನುಷ ರೀತಿಗಳಲ್ಲಿ ಒಂದು ಎಂಬುದು ಎಷ್ಟು ಸತ್ಯವೋ, ತನ್ನ ಆಸೆ ಆಕಾಂಕ್ಷೆಗಳಿಗೆ, ಭಕ್ತಿ ಗೌರವಗಳಿಗೆ ಮುಗ್ದನೊಬ್ಬನು ಬಲಿಕೊಡುವ ರೀತಿಗಳಲ್ಲಿ ಒಂದು ಎಂಬುದು ಕೂಡ ಅಷ್ಟೇ ಸತ್ಯ. ಬಲಿಯ ಸಂದರ್ಭಗಳು ಅನೇಕ, ಉದ್ದೇಶಗಳು ಅನೇಕ, ಹಾಗೆಯೇ ರೀತಿಗಳು ಅನೇಕ. ಒಂದೊಂದು ಸಂದರ್ಭದಲ್ಲಿ ಒಂದೊಂದು ರೀತಿ ಆದರೆ ಎಲ್ಲ ಸಂದರ್ಭಗಳ ಹಿನ್ನಲೆಯಲ್ಲಿ ನಿರ್ದಿಷ್ಟ ರೂಪದ ದೃಢ ಮನಸ್ಸೊಂದು ಗೋಚರಿಸುತ್ತದೆ. ಶಿಷ್ಟ ಅಥವಾ ದುಷ್ಟ ದೇವತೆಗಳನ್ನು ಸಂಪ್ರಿತಗೊಳಿಸುವುದಾಗಲೆ, ದುಷ್ಟ ಶಕ್ತಿಗಳನ್ನು ಕೈವಶ ಮಾಡಿಕೊಂಡು ಭಯಂಕರ ಭಯದ ವಾತಾವರಣ ಸೃಷ್ಟಿಸಿ ಪರಿಸರವನ್ನು ಹತೋಟಿಯಲ್ಲಿಟ್ಟುಕೊಳ್ಳಲು ನಡೆಸುವ ಕಾರ್ಯಕ್ರಮದ ಅಂಗವಾಗಲಿ, ಭೂಮಿಗೆ ಅಥವಾ ಬೆಳೆಗಳಿಗೆ ಕೃತಜ್ಞತೆತೋರಿಸುವುದಕ್ಕಾಗಲಿ, ಉದ್ದೇಶ ಯಾವುದೇ ಆಗಿದ್ದರೂ ಹಿನ್ನಲೆಯಲ್ಲಿ ಕಾಣುವುದು ಒಂದೇ ವಸ್ತು. ಅದು ಮನುಷ್ಯನ ಸ್ವಾರ್ಥ ಇದನ್ನು ಸಾಮಾಜಿಕ ಸಂದರ್ಭದಲ್ಲಿ ಹೇಳುವುದಾದರೆ ಅಪೇಕ್ಷೆ ಎನ್ನಬಹುದು.

ಕಲಘಟಗಿಯ ಹತ್ತಿರವಿರುವ ದುಮ್ಮವಾಡದ ಕೆರೆಯು ತುಂಬಿತೆಂದರೆ ಆ ಕೆರೆಗೆ ನರಬಲಿ ಕೊಡುವುದು ವಾಡಿಕೆಯಾಗಿದೆ ಎಂದು ಕ್ಷೇತ್ರಾಧ್ಯಯನ ಸಂದರ್ಭದಲ್ಲಿ ನಮಗೆ ತಿಳಿದು ಬಂದ ಮಾಹಿತಿಯಾಗಿದೆ. ಅದೇ ರೀತಿ ಕೆರೆಗೆ ಹಿಂದೆ ಎರಡು ಬಲಿಯನ್ನು ಕೊಟ್ಟಿರುವುದು ಸ್ಥಳೀಯರಿಂದ ತಿಳಿದುಬಂದಿದೆ.

ಕಲಘಟಗಿ ತಾಲೂಕಿನಲ್ಲಿ ಜನಪದರು ರೂಢಿಸಿಕೊಂಡು ಬಂದಿರುವ ಆಚರಣೆಗಳೆಂದರೆ ದೀಪಾವಳಿ, ಯುಗಾದಿ, ಮಹಾನವಮಿ, ಕಾರಹುಣ್ಣಿಮೆ, ಅದೇರೀತಿ ಮಳೆ ಬಾರದೇ ಇದ್ದಾಗ ಅಲ್ಲಿನ ಜನರು ಕಪ್ಪೆಗೆ ಮದುವೆ ಮಾಡುವುದು, ಮೆರವಣಿಗೆ ಮಾಡುವುದು, ಕತ್ತೆ ಮೆರವಣಿಗೆ ಮಾಡುವುದು ಇನ್ನು ಪುರಾಣ ಕಾರ್ಯವನ್ನು ಮುಂತಾದ ಆಚರಣೆಗಳು ಈ ತಾಲೂಕಿನಲ್ಲಿ ಇಂದಿಗೂ ರೂಢಿಯಲ್ಲಿವೆ.

**ಕತ್ತೆ ಮೆರವಣಿಗೆ**

ಕಲಘಟಗಿ ಪರಿಸರದ ಅನೇಕ ಗ್ರಾಮಗಳಲ್ಲಿ ಮಳೆ ಬಾರದೆ ಇದ್ದಾಗ ಆ ಊರಿನಲ್ಲಿರುವ ಕತ್ತೆಯನ್ನು ಬೇರೆ ಊರಿಗೆ ಹೋಗಿ ಅದನ್ನು ಊರಿನ ಸೂತ್ತ ಮೆರವಣಿಗೆ ಮಾಡುವುದರಿಂದ ಮಳೆ ಬರುವುದು ಎಂಬ ಅಪಾರವಾದ ನಂಬಿಕೆ ಜನರಲ್ಲಿತ್ತು. ಆದ್ದರಿಂದ ಇಂತಹ ಕಾರ್ಯವನ್ನು ಮಾಡುತ್ತಿದ್ದರು ಹಾಗೂ ಈ ಆಚರಣೆಯಲ್ಲಿ ಸ್ಥಳೀಯರು ಪಾಲ್ಗೊಳ್ಳುತ್ತಿದ್ದರು. ಇಂತಹ ಒಂದು ಆಚರಣೆ ಕಲಘಟಗಿ ಪ್ರದೇಶದಲ್ಲಿ ಮಾತ್ರ ಇರದೇ ವಿವಿಧ ಪ್ರದೇಶಗಳಲ್ಲಿ ಸಹ ಈ ಒಂದು ಆಚರಣೆ ಇರುವುದು ಕಂಡುಬಂದಿದೆ.

**ನವರಾತ್ರಿ ಆಚರಣೆ:**

ನವರಾತ್ರಿ ದಿನದಂದು ಅಲ್ಲಿಯ ಜನರು ಸಕಲ ವಾದ್ಯಗಳೊಂದಿಗೆ ಮತ್ತು ಪೂಜಾ ಪರಿಕರಗಳನ್ನು ತೆಗೆದುಕೊಂಡು ಮೆರವಣಿಗೆ ಮೂಲಕ ಕೆರೆಗೆ ಹೋಗಿ ಪೂಜೆಯನ್ನು ಸಲ್ಲಿಸುವುದು ಮತ್ತು ಊರಿನ ಎಲ್ಲ ಜನರು ಕೂಡಿ ನವರಾತ್ರಿ ಹಬ್ಬವನ್ನು ಆಚರಣೆ ಮಾಡುವುದು ರೂಢಿಯಲ್ಲಿದೆ ಎಂದು ಹೇಳಬಹುದಾಗಿದೆ.

**ಗುರ್ಜಿ ಆಚರಣೆ**

ಕಲಘಟಗಿ ಪರಿಸರದಲ್ಲಿ ಬರಗಾಲ ಸಂದರ್ಭದಲ್ಲಿ ಇಲ್ಲಿನ ಮಹಿಳೆಯರು ಎಲ್ಲರೂ ಒಟ್ಟಿಗೆ ಸೇರಿ ಒಂದು ಹಂಚನ್ನು ತೆಗೆದುಕೊಂಡು ಅದಕ್ಕೆ ಸಗಣಿಯನ್ನು ಆ ಹಂಚಿನ ಮೇಲೆ ಇಟ್ಟುಕೊಂಡು ಊರಿನ ತುಂಬೆಲ್ಲಾ ತಿರುಗಾಡುತ್ತಾರೆ ಈ ಮಹಿಳೆಯರು ಇದರ ಕುರಿತು ಒಂದು ಪದ್ಯವನ್ನು ಈ ರೀತಿಯಾಗಿ ಕಟ್ಟಿದ್ದಾರೆ ಗುರ್ಜಿ ಗುರ್ಜಿ ಹಳ್ಳಾ ಕೊಳ್ಳಾ ತಿರಿಗ್ಯಾಡ ಬಂದು ಸುರಿಮಳೆ ಸುರಿಮಳೆ ಎಂಬ ಹಾಡಿನ ಮೂಲಕ ಊರಿನ ತುಂಬೆಲ್ಲಾ ಸುತ್ತಾಡಿ ಅದರಲ್ಲಿ ಬಂದಂತಹ ಸಾಮಗ್ರಿಗಳನ್ನು ತೆಗೆದುಕೊಂಡು ಊರಿನ ಕೆರೆ ಅಥವಾ ಹಳ್ಳದ ಸಮೀಪ ಇರುವ ದೇವಿಗೆ ಬೇಡಿಕೊಳ್ಳುತ್ತಾರೆ ಮತ್ತು ಸಾಮೂಹಿಕವಾಗಿ ಅಡುಗೆ ಮಾಡಿ ದೇವಿಗೆ ಅರ್ಪಿಸಿ ನಂತರ ಎಲ್ಲರೂ ಊಟವನ್ನು ಮಾಡುತ್ತಾರೆ. ಇಂತಹ ಆಚರಣೆ ಈ ತಾಲೂಕಿನಲ್ಲಿ ನಡೆಯುತ್ತದೆ ಎಂದು ಹೇಳಲಾಗಿದೆ.

**ಅಡಿ ಟಿಪ್ಪಣಿ :**

೧. ಮಂಜುನಾಥ ಬೇವಿನಕಟ್ಟಿ ., ನಂಬಿಕೆ ಮತ್ತು ಆಚರಣೆಗಳು, ಪುಟ-೨೩

೨. ಅದೇ ಪುಟ-೧೩೬

೩. ಸಿ.ಎಸ್.ವಾಸುದೇವನ್., ಹಂಪಿ ಪರಿಸರದ ಕೆರೆಗಳು, ೮೮-೮೯

೪. ಮಾಹಿತಿ ನೀಡಿದವರು., ಗೋಪಾಲರಾವ್ ಕೆ.

೫. ಮಂಜುನಾಥ ಬೇವಿನಕಟ್ಟಿ ., ನಂಬಿಕೆ ಮತ್ತು ಆಚರಣೆಗಳು, ಪುಟ-೧೪೬

೬. ಕ್ಷೇತ್ರಕಾರ್ಯ ವರದಿ.

## ಅಧ್ಯಾಯ–ಆರು

# ಸಮಾರೋಪ

ಕಲಘಟಗಿ ತಾಲೂಕಿನ ಪ್ರಮುಖ ಕೆರೆಗಳ ಕುರಿತು ಅಧ್ಯಯನ ಮಾಡುವ ಸಂದರ್ಭದಲ್ಲಿ ಅಲ್ಲಿ ದೊರೆತ ಮಾಹಿತಿ ಕುರಿತು ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ. ಈ ಪರಿಸರದಲ್ಲಿ ಒಟ್ಟು ೩೯೦ ಕರೆಗಳಿದ್ದು, ಅವುಗಳಲ್ಲಿ ಸಣ್ಣಕೆರೆಗಳ ಸಂಖ್ಯೆ ೩೩೦ ಇದ್ದು ಅದೇ ರೀತಿ ೫೯ ದೊಡ್ಡಕೆರೆಗಳು ಇರುವುದು ಕಂಡುಬಂದಿದೆ. ಆ ಕೆರೆಗಳಲ್ಲಿ ಕೆಲವು ಶಾಸನೋಕ್ತ ಕೆರೆಗಳು ಇವೆ. ಇಂದು ಜನರು ಅವುಗಳನ್ನು ತಮ್ಮ ದೈನಂದಿನ ಬಳಕೆಗೆ ಉಪಯೋಗಿಸಿಕೊಳ್ಳುತ್ತಿದ್ದಾರೆ ಎಂದು ಹೇಳಲಾಗಿದೆ. ಇಲ್ಲಿ ದೊರೆತ ಶಾಸನದ ಮೂಲಕ ಅವುಗಳ ಕಾಲವನ್ನು ಹಾಗೂ ಆ ಕೆರೆಯನ್ನು ಕಟ್ಟಲು ಭೂಮಿಯನ್ನು ದಾನವಾಗಿ ಕೊಟ್ಟವರ ಹೆಸರನ್ನು ಈ ಶಾಸನದ ಮೂಲಕ ತಿಳಿದುಕೊಳ್ಳಲಾಗಿದೆ. ಈ ತಾಲೂಕಿನಲ್ಲಿರುವ ಕೆರೆಗಳಲ್ಲಿ ಅತ್ಯಂತ ದೊಡ್ಡಕೆರೆ ಎಂದರೆ ದೇವಿಕೊಪ್ಪದ ಹೀರೆಕೆರೆ ಅದು ಸುಮಾರು ೪೩೩ ಎಕರೆ ಜಲಾನಯನ ಪ್ರದೇಶವನ್ನು ಹೊಂದಿದೆ ಎಂದು ಹೇಳಲಾಗಿದೆ. ಅದೇ ರೀತಿ ಸೋಮನಕೊಪ್ಪದ ತುಂಬಿಕೆರೆಯು ಕೇವಲ ನಾಲ್ಕು ಎಕರೆ ಜಲಾನಯನ ಪ್ರದೇಶವನ್ನು ಹೊಂದಿದ ಚಿಕ್ಕಕೆರೆಯಾಗಿದೆ. ಇಲ್ಲಿನ ಕೆಲವು ಕೆರೆಗಳು ಒತ್ತುವರಿಯಾಗಿವೆ ಎಂದು ಕಲಘಟಗಿ ಪರಿಸರದಲ್ಲಿಯ ಕೆರೆ ಈ ರೀತಿಯಾಗಿದೆ. ಉದಾಹರಣೆಗೆ ಕಲಘಟಗಿಯ ರುಸ್ತುಂಕೆರೆ ಇದು ಮೊದಲು ಹಿಂದೂಗಳ ದೇವಾಲಯವಾಗಿದ್ದು ಮುಸ್ಲೀಮರು ಇದರ ಒತ್ತುವರಿ ಮಾಡಿಕೊಂಡು ಅದನ್ನು ಇಂದು ರುಸ್ತುಂಕೆರೆ ಎಂದು ಕರೆಯುವುದು ರೂಢಿಯಲ್ಲಿದೆ. ಈ ಕೆರೆಯ ನೀರನ್ನು ಜನರು ಕುಡಿಯಲು, ದನಕರುಗಳ ಬಳಕೆಗೆ, ಮನೆಯ ಬಳಕೆಗೆ, ಮೀನುಗಾರಿಕೆಗೆ, ಪಶುಸಂಗೋಪನೆಗೆ ಹಾಗೂ ಹೊಲಗಳಿಗೆ ಈ ಕೆರೆಯ ನೀರನ್ನು ಉಪಯೋಗಿಸುತ್ತಾರೆ. ಮತ್ತು ಇಲ್ಲಿನ ಕೆರೆಗಳನ್ನು ರಾಜ್ಯಸರ್ಕಾರ ೨೦೧೦ ರಲ್ಲಿ ಕಾಮಗಾರಿಯನ್ನು ಮಾಡಿರುವುದು ಕಂಡುಬಂದಿದೆ ಹಾಗೂ ಪ್ರಸ್ತುತವಾಗಿ ಕೆಲವು ಕೆರೆಗಳ ಹೂಳೆತ್ತುವ ಕಾರ್ಯ ಪ್ರಗತಿಯಲ್ಲಿರುವುದು ಕಂಡುಬಂದಿದೆ. ಉದಾಹರಣೆಗೆ; ಹೀರೆಹೊನ್ನಳ್ಳಿ ಹೀರೆಕೆರೆ ಹಾಗೂ ತಂಬೂರಿನ ದೊಡ್ಡಕೆರೆಗಳಲ್ಲಿ ಈ ಕಾರ್ಯ ಪ್ರಗತಿಯಲ್ಲಿದೆ.

ಒಂದು ಕೆರೆಯ ನಿರ್ಮಾಣ ಮಾಡಬೇಕಾದರೆ ಅವುಗಳಿಗೆ ಸಂಬಂಧಿಸಿದ ವಿಧಿವಿಧಾನವನ್ನು ಹಾಗೂ ಆ ಕೆರೆಯನ್ನು ರಕ್ಷಿಸಲೆಂದು ದೇವಸ್ಥಾನಗಳನ್ನು ನಿರ್ಮಿಸುತ್ತಿದ್ದರು. ಅದೇ ರೀತಿ ಕಲಘಟಗಿ ತಾಲೂಕಿನ ಸಂಗಮೇಶ್ವರ ಕೆರೆಯ ಏರಿಯ ಮೇಲೆ ಹನುಮಂತ ದೇವರ ಗುಡಿ ಇರುವುದು ಕಾಣಬಹುದಾಗಿದೆ. ಏಕೆಂದರೆ ಕೆರೆಯ ಕೋಡಿಯನ್ನು ಕಾಯುವ ರಕ್ಷಕ ಎಂದು ಇಲ್ಲಿನ ಜನರ ನಂಬಿಕೆ ಎಂದು ಹೇಳಬಹುದು. ಇನ್ನೂ ಹಲವು ದೇವತೆಗಳ ಮೂರ್ತಿಶಿಲ್ಪವನ್ನು ನಿರ್ಮಿಸಿರುವುದನ್ನು ಕಾಣಬಹುದಾಗಿದೆ. ಉದಾಹರಣೆಗೆ; ಮಲಕನಕೊಪ್ಪ ಗ್ರಾಮದ ಕೆರೆಯ ಮುಂದೆ ಕರಿಯಮ್ಮನ ಗುಡಿಯ ಒಳಗಡೆ ಮೂರ್ತಿಶಿಲ್ಪ ಇರುವುದು ಕಂಡುಬಂದಿದೆ. ಇಲ್ಲಿನ ಹೆಚ್ಚಿನ ಕೆರೆಗಳಲ್ಲಿ ಕಲ್ಮೇಶ್ವರ, ರಾಮಲಿಂಗೇಶ್ವರ,

ಬಸವೇಶ್ವರ, ದ್ಯಾಮವ್ವನ ಗುಡಿಗಳ ನಿರ್ಮಾಣವನ್ನು ಕೆರೆಯ ಏರಿಯ ಮೇಲೆ ನಿರ್ಮಾಣ ಮಾಡಿರುವುದನ್ನು ಕಾಣಬಹುದಾಗಿದೆ. ಈ ಎಲ್ಲ ದೇವಾಲಯಗಳ ಕುರಿತು ಕ್ಷೇತ್ರಕಾರ್ಯ ಅಧ್ಯಯನ ಸಂದರ್ಭದಲ್ಲಿ ತಿಳಿದುಬಂದಿದೆ. ಕಲಘಟಗಿಯ ರುಸ್ತುಂಕೆರೆಯ ಏರಿಯ ಮೇಲೆ ಬನ್ನಿಮರದ ಹತ್ತಿರ ನಾಗರ ಮೂರ್ತಿ ಇರುವುದು ಕಂಡುಬಂದಿದೆ. ಈ ಪ್ರದೇಶದ ಜನರಲ್ಲಿರುವ ನಂಬಿಕೆ ಎಂದರೆ ಹೆಣ್ಣು ಮಕ್ಕಳು ನಾಗರ ಕಲ್ಲನ್ನು ಪ್ರತಿಷ್ಠಾಪಿಸಿ ನಾಗದೋಷವನ್ನು ನಿವಾರಣೆ ಮಾಡಿಕೊಳ್ಳಲು ಪೂಜೆ ಪುನಸ್ಕಾರವನ್ನು ಕೈಗೊಳ್ಳುತ್ತಿರುವುದು ಗಮನಾರ್ಹ.

ಪ್ರಸ್ತುತವಾಗಿ ಕೆರೆಯ ನೀರನ್ನು ಇಂದು ಇಲ್ಲಿನ ಜನರು ಕುಡಿಯಲು ಉಪಯೋಗಿಸುತ್ತಾರೆ. ಬೇಸಾಯ ಮಾಡಲು, ಮೀನುಗಾರಿಕೆ ಮಾಡಲು, ಪಶುಸಂಗೋಪನೆಗೆ, ಕಟ್ಟಡ ನಿರ್ಮಾಣ ಮಾಡಲು, ಗಿಡ–ಮರಗಳಿಗೆ ಕಾಲುವೆ ಮುಖಾಂತರ ಇತರ ಸಣ್ಣ ಪುಟ್ಟ ಕೆರೆಗಳಿಗೆ ಈ ನೀರನ್ನು ಹರಿಸಲಾಗುತ್ತದೆ. ಇದರಿಂದ ಇಲ್ಲಿನ ಜನರಿಗೆ ಯಾವುದೇ ರೀತಿಯ ತೊಂದರೆಯಾಗದಂತೆ ನೋಡಿಕೊಳ್ಳುತ್ತಿರುತ್ತಾರೆ. ಕೆರೆಯ ನಿರ್ಮಾದ ಅನುಕೂಲತೆ ಇರುವುದರಿಂದ ಇಂದಿನ ದಿನಮಾನದಲ್ಲಿ ಜನರು ಸಂತೋಷದಿಂದ ಜೀವನವನ್ನು ಸಾಗಿಸುತ್ತಿದ್ದಾರೆ. ಪ್ರಾಚೀನ ಕಾಲಕ್ಕೆ ಹೋಲಿಸಿದರೆ ಇಂದು ಮಳೆಯ ಪ್ರಮಾಣ ಬಹಳ ಕಡಿಮೆಯಾಗಿದೆ. ಇದಕ್ಕೆ ಪ್ರಾಕೃತಿಕ ಅನಾನುಕೂಲ ಹಾಗೂ ಮಾನವನ ಅನುಕೂಲತೆ ಕಾರಣವಾಗಿರುವುದು ವಿಷಾದನೀಯ.

ಕ್ಷೇತ್ರಾಧ್ಯಯನ ಸಂದರ್ಭದಲ್ಲಿ ಕಂಡುಬಂದ ಮಾಹಿತಿ ಪ್ರಕಾರ ಈ ತಾಲೂಕು ಮಲೆನಾಡು ಪ್ರದೇಶವಾದ್ದರಿಂದ ಇಲ್ಲಿ ಪ್ರಮುಖವಾಗಿ ಈ ಪರಿಸರದಲ್ಲಿ ಅನೇಕ ಬೆಳೆಗಳನ್ನು ಬೆಳೆಯುತ್ತಿರುವುದನ್ನು ನೋಡಲಾಗಿ ಅವುಗಳಲ್ಲಿ ಪ್ರಮುಖವಾಗಿ ಇಂದು ಆಯಕಟ್ಟಿನ ಪ್ರದೇಶದ ಜನರು ತಮ್ಮ ಗದ್ದೆಗಳಲ್ಲಿ ಕೆರೆಯ ನೀರನ್ನು ಬಳಸಿಕೊಂಡು ಕೃಷಿ ಮಾಡುತ್ತಿರುವುದು ಮತ್ತು ಇಲ್ಲಿ ಮುಖ್ಯವಾಗಿ ಬೆಳೆಯಬಹುದಾದ ಬೆಳೆ ಎಂದರೆ ಹತ್ತಿ, ಗೊಧಿ, ಜೋಳ, ತೋಗರಿ, ಭತ್ತ, ಕಬ್ಬು ಹಾಗೂ ದ್ವಿದಳ ಧಾನ್ಯಗಳಾದ ಶೇಂಗ, ಕಡಲೆ, ಹೆಸರು ಮುಂತಾದ ಬೆಳೆಗಳನ್ನು ಇಲ್ಲಿ ಬೆಳೆಯುವುದು ಕಂಡುಬಂದಿದೆ. ಈ ಎಲ್ಲ ಬೆಳೆಗಳನ್ನು ಬೆಳೆಯಲು ಇಲ್ಲಿಯ ಜನರು ಕೆರೆಗಳ ನೀರನ್ನು ಉಪಯೋಗಿಸಿಕೊಳ್ಳತ್ತಾರೆ. ಅದೇ ರೀತಿ ಕಲಘಟಗಿ ತಾಲೂಕಿನಲ್ಲಿ ಪ್ರಮುಖವಾಗಿ ತೊಟ್ಟಿಲು ತಯಾರಿಕೆಗೆ ಈ ಪ್ರದೇಶ ಪ್ರಸಿದ್ಧವಾಗಿದೆ. ಇವರು ಅಲ್ಲಿ ಬೆಳೆಯುವ ಮರಗಳನ್ನು ಬಳಸಿಕೊಂಡು ತೊಟ್ಟಿಲುಗಳನ್ನು ನಿರ್ಮಿಸುತ್ತಾರೆ ಎಂದು ಹೇಳಲಾಗುತ್ತದೆ. ಈ ಕಾರ್ಯವನ್ನು ಸ್ಥಳೀಯ ನಿವಾಸಿಗಳಾದ ಬಡಿಗೇರ ಮನೆತನದವರು ತೊಟ್ಟಿಲನ್ನು ತಯಾರಿಸುತ್ತಾರೆ ಎಂದು ಹೇಳಲಾಗಿದೆ.

ಕೆರೆಯು ಪವಿತ್ರವಾದುದೆಂಬ ಭಾವನೆಯು ಜನರಲ್ಲಿರುವುದನ್ನು ಕಾಣಬಹುದು. ಏಕೆಂದರೆ ದೇವತೆಗಳು ಜಲವಿಹಾರಕ್ಕೆಂದು ಆಗಮಿಸುತ್ತಾರೆ ಹಾಗಾಗಿ ಕೆರೆಯ ಸೂತ್ತಲೂ ಗ್ರಾಮದೇವತೆಗಳು ಶಿವರಾತ್ರಿಯಿಂದ ಪ್ರಾರಂಭ ಮಾಡಿ ಯುಗಾದಿವರೆಗೆ ಗಂಗಾ ಸ್ನಾನಕ್ಕೆ ಆಗಮಿಸುತ್ತಾರೆ ಎಂಬ ಮನೋಭಾವನೆ ಅಲ್ಲಿನ ಜನರಲ್ಲಿ ಮೂಡಿತ್ತು. ಕೆಲವು ಗ್ರಾಮದ ದೇವತೆಗಳು ಶ್ರಾವಣ ಮತ್ತು ಕಾರ್ತಿಕ

ಮಾಸದಲ್ಲಿ ಬರುತ್ತವೆ. ಇಲ್ಲಿನ ಗ್ರಾಮದೇವತೆಗಳನ್ನು ಅಲ್ಲಿನ ಭಕ್ತರು ಭಕ್ತಿಯಿಂದ ಕರೆತಂದು ಅವುಗಳಿಗೆ ಗಂಗಾಸ್ನಾನ ಮಾಡಿಸಿ, ಪೂಜಾ ಸಾಮಗ್ರಿಯನ್ನು ಮತ್ತು ಅಲಂಕರಣ ಸಾಮಗ್ರಿಯನ್ನು ಸ್ವಚ್ಛಗೊಳಿಸುತ್ತಾರೆ. ಎಂಬ ನಂಬಿಕೆ ಇಲ್ಲಿನ ಜನರಲ್ಲಿ ಗಾಢವಾದ ಪ್ರಭಾವ ಬೀರಿದೆ ಎಂದು ತಿಳಿದುಬಂದಿದೆ.

ಒಟ್ಟಾರೆಯಾಗಿ ಹೇಳುವುದಾದರೆ ಕಲಘಟಗಿ ತಾಲೂಕು ಮಲೆನಾಡು ಪ್ರದೇಶವಾದ್ದರಿಂದ ಇದು ಮುಂದುವರೆದ ಪ್ರದೇಶವಾಗಿದೆ ಎಂದು ಹೇಳಬಹುದು. ಈ ತಾಲೂಕಿನಲ್ಲಿ ಒಟ್ಟು ೩೩೦ ಸಣ್ಣ ಹಾಗೂ ದೊಡ್ಡಕೆರೆಗಳಿದ್ದು, ಅವುಗಳ ಬಳಕೆ ಇಂದಿನ ದಿನಮಾನದಲ್ಲಿ ಅವಶ್ಯವಾಗಿದೆ. ಇಲ್ಲಿನ ಕೆರೆಯ ನೀರಿನಿಂದ ತಾಲೂಕಿನ ಜನರು ಇಂದು ಯಾವುದೇ ರೀತಿಯ ತೊಂದರೆಗೆ ಒಳಗಾಗದೇ ತಮ್ಮ ಜೀವನ ಸಾಗಿಸುವಂತಾಗಿದೆ. ಕೆರೆಗಳ ಬಳಕೆ ಇಲ್ಲದಿದ್ದರೆ ಅವರು ಬೇರೆಡೆಗೆ ನೀರಿಗಾಗಿ ಪರದಾಡಬೇಕಾಗಿತ್ತು. ಇದರಿಂದ ಇಲ್ಲಿನ ಕೆರೆಗಳು ಜನರ ಜೀವಾಳವಾಗಿವೆ. ಇದರಿಂದ ಕೆರೆಗಳು ಇಂದು ಮಹತ್ವದ ಸ್ಥಾನವನ್ನು ಪಡೆದಿವೆ ಎಂದು ಹೇಳಲಾಗಿದೆ. ಪ್ರಸ್ತುತ ದಿನಮಾನದಲ್ಲಿ ಮಳೆಯ ಪ್ರಮಾಣ ಕಡಿಮೆಯಾಗಿದ್ದರಿಂದ ಈ ಕೆರೆಗಳು ಆಧಾರವಾಗಿವೆ ಆದ್ದರಿಂದ ಕೆರೆಗಳ ಮಹತ್ವ ಅವಶ್ಯಕವಾಗಿದೆ ಎನ್ನಬಹುದು. ಈ ಎಲ್ಲ ಮಾಹಿತಿಗಳನ್ನು ಶಾಸನ ಆಧಾರದಿಂದ ತಿಳಿದುಕೊಳ್ಳಲಾಗಿದೆ. ಇಲ್ಲಿ ಪ್ರಮುಖವಾಗಿ ಶಾಸನೋಕ್ತ ಕೆರೆಗಳಿರುವುದು ಸಹ ಕಂಡುಬಂದಿವೆ.

## ಪರಾಮರ್ಶನ ಗ್ರಂಥಗಳು


೧. ಕಲಬುರ್ಗಿ ಎಂ.ಎಂ., ಧಾರವಾಡ ಜಿಲ್ಲಾ ಶಾಸನ ಸೂಚಿ, ಸಪ್ನಾ ಬುಕ್‌ಹೌಸ್, ಬೆಂಗಳೂರು.

೨. ಕಲಬುರ್ಗಿ ಎಂ.ಎಂ., ೨೦೧೦, ಮಾರ್ಗ ಸಂಪುಟಗಳು, ಸಪ್ನಾ ಬುಕ್‌ಹೌಸ್, ಬೆಂಗಳೂರು.

೩. ಕಸ್ತೂರಿ ನೀಲತ್ತಹಳ್ಳಿ, ೨೦೦೨, 'ಕರ್ನಾಟಕದಲ್ಲಿ ಕೆರೆ ನೀರಾವರಿ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪. ಕುಪ್ಪಸ್ವಾಮಿ ಜಿ.ಆರ್., ೨೦೧೧, 'ಕರ್ನಾಟಕದಲ್ಲಿ ಕೆರೆ ನೀರಾವರಿ ವ್ಯವಸ್ಥೆ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫. ಗೋಪಾಲರಾವ್ ಎಚ್.ಎಸ್., ೧೯೯೩, 'ಶಾಸನಗಳ ಹಿನ್ನಲೆಯಲ್ಲಿ ಕಲ್ಯಾಣ ಚಾಲುಕ್ಯರ ದೇವಾಲಯಗಳು', ಪ್ರಾಚ್ಯವಸ್ತು ಮತ್ತು ಸಂಗ್ರಾಹಲಯಗಳ ನಿರ್ದೇಶನಾಲಯ, ಮೈಸೂರು.

೬. ಚಿದಾನಂದಮೂರ್ತಿ ಎಂ., ೨೦೦೨, 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ', ಸಪ್ನಾ ಬುಕ್‌ಹೌಸ್, ಬೆಂಗಳೂರು.

೭. ಜಯಲಕ್ಷ್ಮೀ ಸೀತಾಪುರ, ಸಿ. ಮಹದೇವ(ಸಂ), ೨೦೦೯, 'ನಂಬಿಕೆ ಮತ್ತು ಆಚರಣೆ', ತೊಣ್ಣೂರು ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೮. ದೇಸಾಯಿ ಪಿ.ಬಿ., ೧೯೯೭, 'ಕನ್ನಡ ನಾಡಿನ ಶಾಸನಗಳು', ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೯. ದೇಸಾಯಿ ಪಿ.ಬಿ. ೧೯೬೮, 'ಕರ್ನಾಟಕದ ಇತಿಹಾಸ', ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೧೦. ನರಸಿಂಹಮೂರ್ತಿ.ಎ.ವಿ., ೨೦೧೦, 'ಕರ್ನಾಟಕದ ಸೇವುಣರ ಇತಿಹಾಸ', ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥ ಮಾಲೆ, ಮೈಸೂರು.

೧೧. ನಂದಿಮಠ ಎಸ್.ಸಿ., ೧೯೮೩, 'ಕರ್ನಾಟಕದ ಧರ್ಮಗಳು', ವಿಶ್ವ ಕನ್ನಡ ಸಮ್ಮೇಳನ ಸಾಹಿತ್ಯ ಮಾಲೆ-೭೦,

೧೨. ನಾಗಯ್ಯ ಜೆ.ಎಂ., ೧೯೯೨, '೬ನೆಯ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ', ವೀರಶೈವ ಅಧ್ಯಯನ ಅಕಾಡೆಮಿ, ಬೆಳಗಾವಿ.

೧೩. ನೇಗಿನಹಾಳ ಎಂ. ಬಿ., ೧೯೯೯, 'ನೇಗಿನಹಾಳ ಪ್ರಬಂಧಗಳು', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೪. ಪಂಚಮುಖಿ ಆರ್.ಎಸ್., ೧೯೪೬, 'ಕರ್ನಾಟಕದಲ್ಲಿ ಅರಸು ಮನೆತನಗಳು', ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೧೫. ಬಸವರಾಜ ಕುಂಚೂರು., 'ನಮ್ಮೂರು ಕೆರೆಗಳು', ಶ್ರೀ ಚಕ್ರಪ್ರಕಾಶನ, ಕುಂಚೂರು.

೧೬. ಬಡಿಗೇರ ವಿರೇಶ., ೨೦೧೦, 'ಲಾವಣಿ ಸಾಹಿತ್ಯದಲ್ಲಿ ನೀರಾವರಿ ವ್ಯವಸ್ಥೆ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೭. ಬೆಳಗೇರ ಕೃಷ್ಣಮೂರ್ತಿ., ೨೦೧೧, 'ಜೇಸಾಯ ಮಾಡು', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೮. ಮಹದೇವ ಸಿ., ೨೦೦೬, 'ಕರ್ನಾಟಕ ದೇವಾಲಯ ಕೋಶ (ಧಾರವಾಡ ಜಿಲ್ಲೆ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೯. ಮಂಜುನಾಥ ಬೇವಿನಕಟ್ಟಿ, ೨೦೦೭, 'ನಂಬಿಕೆ ಮತ್ತು ಆಚರಣೆ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೦. ಮೇವುಂಡಿ ಮಲ್ಲಾರಿ., ೨೦೧೩, 'ಕನ್ನಡ ಶಾಸನ ಕವಿಗಳು', ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೨೧. ಗೋಪಾಲ. ಆರ್., ೨೦೦೮, 'ಧಾರವಾಡ ಜಿಲ್ಲೆಯ ಇತಿಹಾಸ ಮತ್ತು ಪುರಾರತ್ವ', ಪ್ರಾಚ್ಯವಸ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು.

೨೨. ರಾಮಚಂದ್ರರಾವ್ ಎಸ್.ಕೆ., ೧೯೮೦, 'ಭಾರತದ ದೇವಾಲಯ ನೆಲೆ-ಹಿನ್ನಲೆ', ಪ್ರಸಾರಾಂಗ, ಬೆಂಗಳೂರು.

೨೩. ವಿರೂಪಾಕ್ಷಿ ಪೂಜಾರಹಳ್ಳಿ., ೧೯೯೯, 'ಜಲಸಂಬಂಧಿ ಚಳುವಳಿಗಳು', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೪. ಶೇಷಶಾಸ್ತ್ರೀ ಆರ್., ೧೯೮೨, 'ಕರ್ನಾಟಕದ ವೀರಗಲ್ಲುಗಳು', ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೨೫. ಸ್ವಾಮಿ ಲ.ನ, ಸಿ. ಮಹದೇವ(ಸಂ), ೨೦೦೯, 'ಕೆರೆ ಕಟ್ಟೆಗಳು', ತೊಣ್ಣುರು ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೬. ವಾಸುದೇವನ್ ಸಿ.ಎಸ್., ೨೦೦೧, 'ಹಂಪಿ ಪರಿಸರದ ಕೆರೆಗಳು', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೭. ಸೋಮೇಶ ಎಂ., ೨೦೧೧, 'ದಣಾಯಕನ ಕೆರೆ', ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೨೮. ಹನುಮಾಕ್ಷಿ ಗೋಗಿ., ೨೦೧೪, 'ಹುಬ್ಬಳ್ಳಿ ತಾಲೂಕಿನ ಶಾಸನಗಳು', ಮಹಿಳಾ ಸಾಹಿತ್ಯಿಕಾ, ಹುಬ್ಬಳ್ಳಿ.

೨೯. ಹರಿಹರ ಶ್ರೀನಿವಾಸರಾವ್., ೨೦೧೦, 'ಚಾವುಂಡರಾಯನ ಲೋಕೋಪಕಾರದಲ್ಲಿ ಜಲವಿಜ್ಞಾನ ತಂತ್ರಜ್ಞಾನ',

## ಇತರ ಲೇಖನಗಳು

೧. ಶಾಂತಕುಮಾರಿ ಎಸ್ ಎಲ್., ತಂಬೂರು ಶಾಸನ, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು.

೨. ಚನ್ನಕ್ಕ ಪಾವಟೆ., ೨೦೦೩, 'ಕಲಘಟಗಿ ಪರಿಸರದಲ್ಲಿ ಶಿವಶರಣರ ಸಂಚಲನದ ಕುರುಹುಗಳು', ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು.

೩. ಅಪ್ಪಣ್ಣ ಹಂಜೆ., ೨೦೧೫, ಕಲಘಟಗಿ ತಾಲೂಕಿನ ಜೈನಾವಶೇಷಗಳು', ವಿದ್ಯಾಶ್ರೀ ಪ್ರಕಾಶನ, ಅಳಗವಾಡಿ.

೪. ಜೋಶಿ ಎಸ್ ಕೆ., ೨೦೧೨, 'ಕಲಘಟಗಿ ಪರಿಸರದ ಪುರಾತತ್ವ', ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು.

## ಗೆಜೆಟಿಯರ್

ಸೂರ್ಯನಾಥ ಕಾಮತ್., ಕರ್ನಾಟಕ ರಾಜ್ಯ ಧಾರವಾಡ ಜಿಲ್ಲೆಯ ಗ್ಯಾಜೀಟಿಯರ್

## ENGLISH BOOKS

Desai P B, (Ed), 1970, History of Karnataka research in institute

Desayar M, 1995, Irrigation in Medieval Tamilunadu QTMS, Bangalore.

Dikshit G S, 2001, Local selp government im medieval Karnataka prasaranga, Karnataka University, Dharwad.

Dikshit G S, Kuppaswami, 1993, Tank of irrigation in Karnataka; G R and mohan s k historical survey, Bangalore.

Kotrayya C.T.M, 1999, Irrigation systems under vijayanagar empire directorate of archeology and museum, Mysore.

## ವಕ್ತೃಗಳ ವಿವರ

| ಕ್ರ. ಸಂ | ವ್ಯಕ್ತಿಯ ಹೆಸರು | ವೃತ್ತಿ | ವಯಸ್ಸು | ಗ್ರಾಮ |
|---|---|---|---|---|
| ೧ | ಮಹವೀರ ಪಾಟೀಲ | ನೀರಾವರಿಇಲಾಖೆ | ೪೮ | ಕಲಘಟಗಿ |
| ೨ | ಪರಮೇಶ್ವರ | ಪೊಲೀಸ್ | ೨೬ | ಸಂಗೇದೇವರಕೊಪ್ಪ |
| ೩ | ಜಾಫರ | ಶಿಕ್ಷಕ | ೨೭ | ತಂಬೂರು |
| ೪ | ಶಂಕ್ರಪ್ಪ | ಚಾಲಕ | ೫೨ | ಹೀರೆಹೊನ್ನಳ್ಳಿ |
| ೫ | ಯಲ್ಲಪ್ಪ | ರೈತ | ೩೦ | ಜಿನ್ನೂರು |
| ೬ | ನಿಂಗಪ್ಪ ಕಿರೆಸೂರ | ರೈತ | ೫೮ | ಸೋಮನಕೊಪ್ಪ |
| ೭ | ರಾಮಕೃಷ್ಣ | ಕಾರ್ಮಿಕ | ೪೬ | ಸಂಗಮೇಶ್ವರ |
| ೮ | ಸಂತೋಷ | ರೈತ | ೩೨ | ಮುತ್ತಗಿ |
| ೯ | ಸೋಮಣ್ಣ ಅಗಡಿ | ರೈತ | ೪೫ | ಜಿನ್ನೂರು |
| ೧೦ | ಸಂಗಪ್ಪ ಮಿರ್ಜಿ | ವ್ಯಾಪಾರಿ | ೪೦ | ಮಲಕನಕೊಪ್ಪ |
| ೧೧ | ಮಂಜುನಾಥ | ವಿದ್ಯಾರ್ಥಿ | ೨೬ | ದುಮ್ಮವಾಡ |

## ಶಾಸನೋಕ್ತ ದೇವಾಲಯಗಳು

| ಕ್ರ.ಸಂ | ಶಾಸನೋಕ್ತ ದೇವಾಲಯ | ಕಾಲ | ಅರಸ | ಊರು | ಪ್ರಕಟನೆ |
|---|---|---|---|---|---|
| ೧ | ಶಿವಾಲಯ | ೧೦೬೮ | ಜಯಕೇಶಿ–೧ | ಸಂಗಮೇಶ್ವರ | ದ ಕದಂಬಾಸ ಆಫ್ ಗೋವಾ |
| ೨ | ಹೊಲ್ಲೇಶ್ವರ | ೧೦೬೮ | ಜಯಕೇಶಿ–೧ | ಶೇಡಂಬಿ | ಆರ್ ಗುರುವ ಅವರ ಸಂಗ್ರಹಣೆ |
| ೩ | ಬಮ್ಮೇಶ್ವರ | ೧೦೭೯ | ವಿಕ್ರಮಾದಿತ್ಯ–೬ | ಮುಕ್ಕಲ | ದ ಕದಂಬಾಸ ಆಫ್ ಗೋವಾ |
| ೪ | ಕಲಿದೇವ ಸ್ವಾಮಿ | ೧೦೮೦ | ವಿಕ್ರಮಾದಿತ್ಯ–೬ | ತೆರಸಿಕೊಪ್ಪ | ದ ಕದಂಬಾಸ ಆಫ್ ಗೋವಾ |
| ೫ | ಕಲಿದೇವ ಸ್ವಾಮಿ | ೧೧೨೯ | ಸೋಮೇಶ್ವರ–೨ | ಕಾಮಧೇನು | ಸೌ.ಇ.ಇ.ವ್ಯಾಲಂ ನಂ |
| ೬ | ಮಾಚೇಶ್ವರ | ೧೧೩೬ | ಸೋಮೇಶ್ವರ–೩ | ಮಿಶ್ರಿಕೋಟೆ | ದ ಕದಂಬಾಸ ಆಫ್ ಗೋವಾ |
| ೭ | ಗ್ರಾಮೇಶ್ವರ | ೧೧೩೮ | ವಿಕ್ರಮಾದಿತ್ಯ–೬ | ಜಿನ್ನೂರು | ದ ಕದಂಬಾಸ ಆಫ್ ಗೋವಾ |
| ೮ | ಹೂಲೇಶ್ವರ | ೧೧೪೨ | ಜಗದೇಕಮಲ್ಲ | ಹುಣಶಿಕಟ್ಟಿ | ದ ಕದಂಬಾಸ ಆಫ್ ಗೋವಾ |
| ೯ | ಚೌಡೇಶ್ವರ | ೧೧೪೬ | ಜಗದೇಕಮಲ್ಲ–೨ | ತಂಬೂರು | – – – |
| ೧೦ | ಉರುಗೇಶ್ವರ | ೧೧೫೮ | ಪೇರ್ಮಾಡಿದೇವ | ಮಡಕಿ ಹೊನ್ನಳ್ಳಿ | – – – |
| ೧೧ | ಸಿದ್ದೇಶ್ವರ | ೧೧೬೨ | ಪೇರ್ಮಾಡಿದೇವ | ಹಾಳಶಿಗೀಕಟ್ಟಿ | |
| ೧೨ | ರೇಚೆಶ್ವರ | ೧೧೬೪ | ಪೇರ್ಮಾಡಿದೇವ | ಶೇಡಂಬಿ | ಸೌ.ಇ.ಇ.ವ್ಯಾಲಂ ನಂ |
| ೧೩ | ಮೂಕೇಶ್ವರ | ೧೧೭೧ | ಸೋಮೇಶ್ವರ–೨ | ಉಗ್ಗಿನಕೇರಿ | |
| ೧೪ | ಸೋಮೇಶ್ವರ | ೧೧೭೧ | ಪೇರ್ಮಾಡಿದೇವ | ಹಸರಂಬಿ | |
| ೧೫ | ಮೈಳಲೇಶ್ವರ | ೧೧೭೪ | ಪೇರ್ಮಾಡಿದೇವ | ಡಿಂಬವಳ್ಳಿ | |
| ೧೬ | ಗ್ರಾಮೇಶ್ವರ | ೧೧೩೮ | ವಿಕ್ರಮಾದಿತ್ಯ–೬ | ಜಿನ್ನೂರು | ದ ಕದಂಬಾಸ ಆಫ್ ಗೋವಾ |
| ೧೭ | ಭೂತೇಶ್ವರ | ೧೨೦೨ | ಜಯಕೇಶಿ | ಗಳಿಗೆ | |
| ೧೮ | ಸೋಮನಾಥ | ೧೨೦೨ | ಜಯಕೇಶಿ–೩ | ಮುತ್ತಗಿ | ದ ಕದಂಬಾಸ ಆಫ್ ಗೋವಾ |
| ೧೯ | ಸೋಮೇಶ್ವರ | ೧೨೦೪ | ಜಯಕೇಶಿ–೩ | ತಂಬೂರು | ಎಸ್.ಎಲ್.ಶಾಂತಕುಮಾರಿ ಇ.ದ.ಸ |
| ೨೦ | ಸುಳೇಶ್ವರ | ೧೨೨೮ | ಜಯಕೇಶಿ–೩ | ಮುತ್ತಗಿ | ದ ಕದಂಬಾಸ ಆಫ್ ಗೋವಾ |


DHARWAD
DISTRICT
BELGAUM
To Belgaum
Kalle
Garag
Byalal
Tupari
Alagwadi
Tadhal
Sotakanahal
Bennihalla
Khannur
NAVALGUND
Morab
Venkatapur
NH-4
Yadvad
Talvai
Khanapur
Kamaragop
Ibrahimpur
Kallapur
Hebli
Mandihal
DHARWAR
Kalvad
Basapura
Kadaggatti
Shivahalli
Dundur
Rayapur
Kadabagatti
Bhadiapura
Kusugall
NH-67
HUBBALLI
Halligeri
Shirguppi
Rotigvad
GADAG
Dhurikop
Allapur
NH-218
UTTARA
KANNADA
Harkinahal
Pale
KUNDGOL
Basapur
LEGEND
National Highway
Major Road
Railway
District Boundary
State Boundary
River
District HQ
Other Town
Major Town
Betadur
Pashupatihal
Sulikatti
KALGHATGI
Kamadoh
Tabakada
Honnihalli
Kargod
NH-4
Harlapura
Arlihond
To Haveri
HAVERI
Map not to Scale
Copyright © 2014 www.mapsofindia.com
(Updated on 17th November 2014)

# KALGHATGI TALUKA WITH VILLAGE BOUNDARIES



# ಕೆರೆಗಳು



ಜಿನ್ನೂರು ಹೊಸ ಕೆರೆ



ಮಲಕನಕೊಪ್ಪನ ಕೆರೆ



ಮಂಗೇಶಿ ಕೆರೆ ಕಲಘಟಗಿ

# ಶಾಸನಗಳು



ರಾಮಲಿಂಗ ದೇವಾಲಯದ ಮುಂದಿರುವ ಶಾಸನ

ತಂಬೂರು



ಬಸವಣ್ಣ ದೇವಾಲಯದ ಮುಂದಿರು ಶಾಸನಗಳ ರಾಶಿ, ತಂಬೂರು



ಗಂಜಿಗಟ್ಟಿ ಮಾರುತಿ ದೇವಾಲಯದ ಹತ್ತಿರವಿರುವ ವೀರಗಲ್ಲು ಶಾಸನ



ಚಿನ್ನೂರು ಹೊಸ ಕೆರೆಯ ದಂಡೆಯ ಮೇಲಿರುವ ಕಲ್ಮೇಶ್ವರ ದೇವಾಲಯದ ಮುಂದಿರುವ ಗಜ ಲಕ್ಷ್ಮೀ ಶಿಲ್ಪ

# ದೇವಾಲಯಗಳು



ದುಮ್ಮವಾಡ ಕೆರೆಯ ಹತ್ತಿರವಿರುವ ಈಶ್ವರ ದೇವಾಲಯ



ಮಾರುತಿ ದೇವಾಲಯ, ಸೋಮನಕೊಪ್ಪ



ಕಲ್ಮೇಶ್ವರ ದೇವಾಲಯ, ಮಡಕಿ ಹೊನ್ನಳ್ಳಿ



ಬಸವೇಶ್ವರ ದೇವಾಲಯ, ತಂಬೂರು

# ತೂಬುಗಳು



ಹೀರೆಕೆರೆಯ ಹತ್ತಿರವಿರುವ ತೂಬು, ಹೀರೆ ಹೊನ್ನಳ್ಳಿ





ಹೀರೆಕೆರೆಯ ಹತ್ತಿರವಿರುವ ತೂಬು, ಬ್ಲಂಡರಗಡ್ಡಿ



ಹೀರೆಕೆರೆಯ ಹತ್ತಿರವಿರುವ ತೂಬು, ದೇವಿಕೊಪ್ಪ

# ಕಾಲುವೆಗಳು



ಹೀರೆಕೆರೆಯ ಹತ್ತಿರವಿರುವ ಕಾಲುವೆ, ತಂಬೂರು





ಹೀರೆಕೆರೆಯ ಹತ್ತಿರವಿರುವ ಕಾಲುವೆಗಳು, ತಂಬೂರು ಮತ್ತು ಜಿನ್ನೂರು



ಹೊಸಕೆರೆ ಹತ್ತಿರವಿರುವ ಕಾಲುವೆ, ಸಂಗಮೇಶ್ವರ

ಮಂಗೇಶಿಕೆರೆಯ ಹತ್ತಿರವಿರುವ ಕಾಲುವೆ, ಕಲಘಟಗಿ

# ಏರಿಗಳು



ಹೀರೆಕೆರೆಯ ಏರಿ, ಹೀರೆಹೊನ್ನಳ್ಳಿ



ಮಂಗೇಶಿಕೆರೆಯ ಏರಿ, ಕಲಘಟಗಿ

# ಕೋಡಿಗಳು



ಹೀರೆಹೊನ್ನಳ್ಳಿ ಹೀರೆಕೆರೆಗೆ ಅಡ್ಡಲಾಗಿ ಕಟ್ಟಿರುವ ಕೋಡಿ



ಕಡಬಗಟ್ಟಿಕೆರೆಗೆ ಅಡ್ಡಲಾಗಿ ಕಟ್ಟಿರುವ ಕೋಡಿ



ಸಂಗಮೇಶ್ವರ ಹೊಸಕೆರೆಗೆ ಅಡ್ಡಲಾಗಿ ಕಟ್ಟಿರುವ ಕೋಡಿ



ಮಲಕನಕೊಪ್ಪದ ಕಲ್ಲಕೆರೆಗೆ ಅಡ್ಡಲಾಗಿ ಕಟ್ಟಿರುವ ಕೋಡಿ

